ಈ ಗ್ರಂಥವು ಸೆಕಂಡರೀ ಸ್ಕೂಲ ಹಾಗು ಟ್ರೇನಿಂಗ ಕಾಲೇಜಗಳ ಲಾಯಬ್ರರಿಗೋಸ್ಕರ ಮುಂಬಯಿ ಸರಕಾರದ ವಿದ್ಯಾಖಾತೆಯವರಿಂದ ಮಂಜೂರಾಗಿದೆ. ( ಮೆ. ಡಾಯರೆಕ್ಟರ ಸಾಹೇಬರವರ ಮಂಜೂರೀ ನಂಬರ S, 86 (c) 183-c / 17-1-30 )

ಆಶ್ರಯದಾತರು:—ಸಿದ್ಧಲಿಂಗಸ್ವಾಮಿ ಹಿರೇಮಠ, ಆ್ಯಂಡ ಕಂಪನಿ, ಮುಂಬಯಿ.

———





ಗ್ರಂಥಕರ್ತ:—

ಫಕೀರಯ್ಯ ಬಸವಯ್ಯ ಇಂಡೀಮಠ,

ಹೆಡ್ ಮಾಸ್ತರ ಕನ್ನಡ ೨ನೇ ನಂಬರ ಶಾಲಾ, ಬ್ಯಾಡಿಗಿ.

ಪ್ರಕಾಶಕರು:—

ರುದ್ರಪ್ಪ ಸಂಗಪ್ಪ ಸಂಕಣ್ಣನವರ,

ಮ್ಯುನಿಸಿಪಲ್ ಕೌನ್ಸಿಲರ,

ಬ್ಯಾಡಿಗಿ

ಸುಪ್ರಸಿದ್ಧ

ಬಾಣ ಕವಿ ವಿರಚಿತ ಕಾದಂಬರಿಯ ಆಧಾರದಿಂದ ರಚಿಸಿದ

ಸಂಗೀತ

# ಪ್ರೇಮಲೀಲಾ ನಾಟಕ.

ಲೇಖಕ: —

ಫಕೀರಯ್ಯ ಬಸವಯ್ಯ ಇಂಡೀಮಠ,

ಹೆಡ್‌ಮಾಸ್ತರ, ಕನ್ನಡ ೨ನೇ ನಂಬರ ಶಾಳಾ, ಬ್ಯಾಡಿಗಿ.

[ಎರಡನೆಯ ಆವೃತ್ತಿ.]

ಸನ್ ೧೯೨೭

ಬೆಲೆ ೧ ರೂಪಾಯಿ.




ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ

ಭಿ. ಶ. ಕಾಳೆ ಇವರಿಂದ ಛಾಪಿಸಲ್ಪಟ್ಟು,

ರಾ. ರಾ. ಗುರುಪ್ಪ ಸಂಗಪ್ಪ ಸಂಕೆಣ್ಣನವರ ಇವರಿಂದ

ಬ್ಯಾಡಗಿಯಲ್ಲಿ ಪ್ರಸಿದ್ಧಿಸಲ್ಪಟ್ಟಿತು.






# ಪ್ರಸ್ತಾವನೆ.

ಸಂಸ್ಕೃತ ವಾಙ್ಮಯದಲ್ಲಿ ಸುಪ್ರಸಿದ್ಧ ಕವಿಯಾದ ಬಾಣನು ರಚಿಸಿದ ಗ್ರಂಥಗಳಲ್ಲಿ, ಕಾದಂಬರಿಯೇ ಶ್ರೇಷ್ಠವಾದದ್ದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಈ ರಸಭರಿತವಾದ ಕಾದಂಬರಿಯನ್ನು ಕರ್ನಾಟಕ ರಂಗಭೂಮಿಯ ಮೇಲೆ ತರಬೇಕೆಂಬ ಕುತೂಹಲವನ್ನು ಇಲ್ಲಿಯ ಎ.ವ್ಹಿ.ಸ್ಕೂಲ ಅ|| ಮಾಸ್ತರರಾದ ಮಿ. ನಾರಾಯಣ ಹಣಮಂತ ಅಣ್ಣೀಗೇರಿ ಇವರು ನನ್ನಲ್ಲಿ ಉಂಟುಮಾಡಿದರು. ಹಾಗೂ ಶ್ರೀಯುತ ದೇವರಾವ ಕುಲಕರ್ಣಿ, ಚೇರಮನ್, ಸ್ಕೂಲಬೋರ್ಡ ಮ್ಯುನಸೀಪಾಲಿಟಿ ಬ್ಯಾಡಿಗಿ ಇವರು, ಈ ಕಾರ್ಯವನ್ನು ಎಡೆಬಿಡದೆ ಸಾಗಿಸಲಿಕ್ಕೆ ನನಗೆ ಉತ್ತೇಜನ ಕೊಟ್ಟರು.

ನಾನು ಈ ವಿಷಯದಲ್ಲಿ ಅಷ್ಟೊಂದು ಬಲ್ಲವನಲ್ಲದಿದ್ದರೂ, ಈ ಮಹತ್ಕಾರ್ಯವನ್ನು ಎಷ್ಟೋ ಎಡರುಗಳು ಬಂದರೂ ಕೊನೆಗಾಣಿಸಿ, ಮಾತೃಭಾಷಾಸೇವೆಯನ್ನು ಅಳಲೀಭಕ್ತಿಯಿಂದ ಮಾಡಬೇಕೆಂದು ಕಂಕಣಬದ್ಧನಾಗಿ ಕುಳಿತೆನು. ಆದರೆ, ಕಥಾಭಾಗವು ದೊಡ್ಡದಿದ್ದು ಸರ್ವರಸಾಲಂಕಾರ ಪರಿಪೂರ್ಣವಾದದ್ದೂ, ಬಹು ಮನೋಹರವಾದದ್ದೂ ಇದ್ದದರಿಂದ, ಈ ಕಾರ್ಯವನ್ನು ಕೊನೆಗಾಣಿಸಲಿಕ್ಕೆ ನನಗೆ ಎರಡು ವರ್ಷಗಳ ಅವಧಿಯು ತಗಲಿತು. ಅಂತೂ-ಇಂತೂ ಈಶಕೃಪೆಯಿಂದ ಸಮುದ್ರದಲ್ಲಿ ಈಸುಬಿದ್ದ ಮನುಷ್ಯನಂತೆ ದಂಡೆಗೆ ಬಂದು ಮುಟ್ಟಿದೆನು. ಈವಿಷಯವಾಗಿ

ಆ ಜಗನ್ನಿಯಾಮಕನನ್ನು ಅನನ್ಯಭಾವದಿಂದ ಪ್ರಾರ್ಥಿಸದೆ ಇರಲಾರೆನು.

ಬಣ್ಣಿಸುವ ಲೋಕೋತ್ತರವಾದ ಬಣತಿಯು, ಬಾಣನಿಗೇ ಸಲ್ಲತಕ್ಕದ್ದೆಂಬದು "ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂಬ ವಚನದ ಮೇಲಿಂದಲೇ ಕಂಡು ಬರುತ್ತದೆ. ಶೃಂಗಾರ-ಕರುಣಾರಸಗಳಂತೂ, ಇದರಲ್ಲಿ ಮೂರ್ತಿಮಂತವಾಗಿರುವವು. ಸರ್ವರಸಾಲಂಕಾರಗಳನ್ನು ಈ ನನ್ನ ಚಿಕ್ಕ ಪುಸ್ತಕದಲ್ಲಿ ತರುವದು ಅಶಕ್ಯವಾದರೂ, ಶ್ರೀಯುತ ಆಪಟೆಯವರು ಮೂಲಗ್ರಂಥದ ಆಧಾರದಿಂದ ರಚಿಸಿದ "ಕಾದಂಬರೀಸಾರ" ಕೈ. ವಾ. ತೂರಮರಿಕೃತ "ಕಾದಂಬರೀಕಥೆ" ಪ್ರೊ. ಪರಾಂಜಪೆ ಕೃತ "ಕಾದಂಬರೀ ನಾಟಕ" ಮೊದಲಾದ ಗ್ರಂಥಗಳ ಆಧಾರದಿಂದ ರಸಭಂಗವಾಗದಂತೆ ಮುಖ್ಯಾಂಶಗಳನ್ನು ಆರಿಸಿ ತೆಗೆದು, ರಂಗಭೂಮಿಗೆ ಅನುಕೂಲವಾಗುವಂತೆ ಬರೆದೆನು. ತರುವಾಯ ಇಲ್ಲಿಯ ಕನ್ನಡ ಶಾಲೆಯ ಹೆಡ್ ಮಾಸ್ತರರಾದ ಶ್ರೀ. ಶಂಕರ ಜೀವಾಜಿ ಉಪ್ಪಿನಬೆಟಗೇರಿ ಇವರು ನನ್ನ ಮೂಲ ಪ್ರತಿಯಲ್ಲಿಯ ಪದ್ಯ-ಭಾಷಾಪ್ರಮಾದಗಳನ್ನೂ, ಕಥಾಸಂವಿಧಾನವನ್ನೂ ತಿದ್ದಿ ಸರಿಗೊಳಿಸಿದರು; ಹಾಗೂ ನನ್ನ ವಿದ್ಯಾಗುರುಗಳಾದ ಶ್ರೀ. ರು. ವಿ. ರುದ್ರಗೌಡರವರು ಕೆಲವು ಅಗತ್ಯದ ಸೂಚನೆಗಳನ್ನು ಮಾಡಿದರು. ಮ. ರಾ. ಎಲ್. ವ್ಹಿ. ಭಾಗವತ ಮೆಡಿಕಲ್ ಪ್ರ್ಯಾಕ್ಟಿಷನರ ಬ್ಯಾಡಿಗಿ ಇವರು, ಇದರೊಳಗಿನ ಪದ್ಯಗಳನ್ನು ರಚಿಸುವಾಗ ಆಧುನಿಕ ಸಮಾಜಕ್ಕೆ ಸೇರಿ ಬರುವ ಅತ್ಯುತ್ತಮವಾದ ಕೆಲವು ಮರಾಠಿ, ಹಿಂದುಸ್ಥಾನಿ, ಗುಜರಾಥಿ ಮೊದಲಾದ ಧಾಟಿಗಳನ್ನು ಸೂಚಿಸಿದರು.

ಗ್ರಂಥವು ಪೂರ್ಣವಾದ ಮೇಲೆ ಇಲ್ಲಿಯ "ಶ್ರೀಮುಪ್ಪಿನೀಶ ಪ್ರಾಸಾದಿಕ ಸಂಗೀತ ಮಂಡಳಿ"ಯವರಿಗೆ ತೋರಿಸಲು, ಅವರು ರಂಗಭೂಮಿಯ ಮೇಲೆ ತರಲಿಕ್ಕೆ ಸಂತೋಷದಿಂದ ಒಡಂಬಟ್ಟರು; ಹಾಗೂ ಮೂರು ತಿಂಗಳಲ್ಲಿಯೇ ಕಲಿತು ಅನೇಕ ಪ್ರಯೋಗಗಳನ್ನು ಮಾಡಿ ಜನರಿಗೆ ಆನಂದವನ್ನುಂಟುಮಾಡಿದರು.

ಈ ವಿಷಯವಾಗಿ ಈ ಕಂಪನಿಯವರಿಗೂ, ಮೇಲೆ ಕಾಣಿಸಿದ ಆಯಾ ವಿಷಯಗಳಲ್ಲಿ ಸಹಾಯಮಾಡಿದ ಸದ್ಗೃಹಸ್ಥರಿಗೂ, ತುಂಬಾ ಉಪಕೃತನಾಗಿರುವೆನು.

ಈ ಗ್ರಂಥವು ದೊಡ್ಡ ಮನಸ್ಸಿನ ಸ್ತ್ರೀ-ಪುರುಷರು ತಮ್ಮ ಮಿತ್ರರ ಸಂಕಟ ಪರಿಹಾರಾರ್ಥವಾಗಿ ಮಾಡತಕ್ಕ ಪ್ರಯತ್ನ, ಪತಿವ್ರತೆಯರಿಗೆ ದೊರೆಯುವ ಫಲ, ಅಸನ್ಮಾರ್ಗದಿಂದುಂಟಾಗುವ ದುಷ್ಟ ಪರಿಣಾಮ, ಪಾಪ ಪರಿಹಾರವಾಗುವದಕ್ಕೆ ದೇವರ ಧ್ಯಾನವೇ ಮುಖ್ಯಸಾಧನ ಎಂಬೀ ಬೋಧಪರ ಸಂಗತಿಗಳ ದ್ಯೋತಕವಾಗಿರುವದು.

ಇದೇ ನನ್ನ ಪ್ರಥಮ ಪ್ರಯತ್ನವಾಗಿರುವದರಿಂದ ಇದರಲ್ಲಿ ಅಗಣಿತ ದೋಷಗಳಿರಬಹುದು. ಅಂಥ ನ್ಯೂನಾತಿರೇಕಗಳೇನಾದರೂ ಕಂಡು ಬಂದರೆ, ವಾಚಕ ಮಹಾಶಯರು ಪ್ರೇಮಪುರಃಸರವಾಗಿ ನನಗೆ ತಿಳಿಸಲು ಅವರಿಗೆ ತುಂಬಾ ಉಪಕೃತನಾಗಿ ಮುಂದಿನ ಆವೃತ್ತಿಯಲ್ಲಿ ಆ ದೋಷಗಳನ್ನು ತಿದ್ದುವೆನು. ಪ್ರೋತ್ಸಾಹನವು ಹೆಚ್ಚೆಚ್ಚು ದೊರೆತಂತೆ ನನ್ನ ಶ್ರಮಕ್ಕೆ ಹೆಚ್ಚೆಚ್ಚು ಪ್ರತಿಫಲವು ಸಿಕ್ಕಿತೆಂದು ನಾನು ತಿಳಿದಿರುವೆನು.

ಬ್ಯಾಡಗಿ,
ತಾ|| 24-5-20

ಫಕೀರಯ್ಯ ಬಸವಯ್ಯ ಇಂಡೀಮಠ,
ಅ|| ಮಾಸ್ತರ
ಕನ್ನಡ ಶಾಲಾ ಬ್ಯಾಡಗಿ.

# ಎರಡನೆಯ ಆವೃತ್ತಿಯ ಪ್ರಸ್ತಾವನೆಯು.

ಮೊದಲನೆಯ ಆವೃತ್ತಿಯ ಎಲ್ಲ ಪ್ರತಿಗಳು ಎರಡೇ ವರ್ಷಗಳಲ್ಲಿ ತೀರಿದ್ದರಿಂದಲೂ, ಅನೇಕ ಜನ ಪಂಡಿತ-ಪದವೀಧರರಿಂದ ಅತ್ಯುತ್ತಮ ಅಭಿಪ್ರಾಯಗಳು ಬಂದದ್ದರಿಂದಲೂ, ಪುಸ್ತಕವು ಜನಪ್ರಿಯವಾಗಿದೆಯೆಂದರಿತು, ಎರಡನೆಯ ಆವೃತ್ತಿಯನ್ನು ತೆಗೆಯಿಸಿರುವೆನು.

ಈ ಮೊದಲು ಪ್ರೋತ್ಸಾಹನವು ದೊರೆದಂತೆ ಇನ್ನುಮೇಲಾದರೂ ದೊರೆಯಬೇಕೆಂದು ಸಕಲ ಬಾಂಧವರಿಗೂ ವಿನಂತಿ ಮಾಡಿಕೊಂಡು ಈ ನನ್ನ ಚಿಕ್ಕ ಲೇಖವನ್ನು ಮುಗಿಯಿಸುವೆನು.

ಸಜ್ಜನ ವಿಧೇಯ,

ಬ್ಯಾಡಗಿ,
ತಾ||೪-೧-೧೯೩೭

ಫಕೀರಯ್ಯ ಬಸವಯ್ಯ ಇಂಡೀಮಠ,
ಹೆಡ್‌ಮಾಸ್ತರ ಕನ್ನಡ ೨ನೇನಂಬರ ಶಾಳಾ ಬ್ಯಾಡಗಿ.

# ಈ ಕಥೆಯೊಳಗೆ ಬರುವವರ ಹೆಸರುಗಳು.

ಮಹಾಶ್ವೇತೆ—ಗಂಧರ್ವ ಕನ್ನಿಕೆ.

ತರಲಿಕಾ, ಪ್ರಮೋದಿನಿ, ಮಧುಕರಿಕೆ, ಪರಭೃತಿಕೆ — ಮಹಾಶ್ವೇತೆಯ ದಾಸಿಯರು.

ಪುಂಡರೀಕ., ಕಪಿಂಜಲ. — ಜೀವದ ಗೆಳೆಯರಾದ ಋಷಿಕುಮಾರರು.

ಚಂದ್ರ., ರೋಹಿಣಿ. — ದಂಪತಿಗಳು.

ಚಂದ್ರಾಪೀಡ—ತಾರಾಪೀಡನ ಮಗನು. (ಪುಂಡರೀಕನ ಶಾಪದಿಂದ ಭೂಮಿಗೆ ಅವತರಿಸಿದ ಚಂದ್ರನು.)

ವೈಶಂಪಾಯನ—ಶುಕನಾಸನ ಮಗನು; ಚಂದ್ರಾಪೀಡನ ಜೀವದ ಗೆಳೆಯನು. (ಪುಂಡರೀಕನ ಎರಡನೇ ಜನ್ಮ.) ಈತನೇ ಮಹಾಶ್ವೇತೆಯ ಶಾಪದಿಂದ ಗಿಳಿಯಾಗಿ ಹುಟ್ಟಿದನು.

ತಾರಾಪೀಡ— ಉಜ್ಜಯಿನೀ ಪಟ್ಟಣದ ಅರಸು.

ವಿಲಾಸವತಿ—ತಾರಾಪೀಡನ ಪಟ್ಟದ ರಾಣಿ.

ಶುಕನಾಸ— ತಾರಾಪೀಡನ ಪ್ರಧಾನನು.

ಮನೋರಮೆ—ಶುಕನಾಸನ ಹೆಂಡತಿ.

ಇಂದ್ರಾಯುಧ — ಚಂದ್ರಾಪೀಡನ ಕುದುರೆ. (ಕಪಿಂಜಲನ ಎರಡನೇ ಜನ್ಮ.)

ಕೇಯೂರಕ—ಕಾದಂಬರಿಯ ದಾಸನು.

ಕಾದಂಬರಿ—ಗಂಧರ್ವ ಕನ್ನಿಕೆ.

ಮದಲೇಖೆ — ಕಾದಂಬರಿಯ ದಾಸಿಯು

ಚಿತ್ರರಥ., ಮದಿರಾದೇವಿ. — ಕಾದಂಬರಿಯ ತಂದೆ-ತಾಯಿಗಳಾದ ಗಂಧರ್ವರು.

ಹಂಸ., ಗೌರಿ. — ಮಹಾಶ್ವೇತೆಯ ತಂದೆ-ತಾಯಿಗಳಾದ ಗಂಧರ್ವರು.

ಶ್ವೇತಕೇತು —ತಪಸ್ವಿಯು.

ಲಕ್ಷ್ಮೀ—ಒಬ್ಬ ಚಾಂಡಾಲ ಕನ್ನಿಕೆಯು.

ಪತ್ರಲೇಖೆ—ಚಂದ್ರಾಪೀಡನ ತಾಂಬೂಲದ ಕರಡಿಗೆ ಹಿಡಿಯುವ ಪ್ರೀತಿಪಾತ್ರಳಾದ ದಾಸಿ. (ಭೂಮಿಗೆ ಅವತರಿಸಿದ ರೋಹಿಣಿ.)

# ಶುದ್ಧಪತ್ರಿಕೆ.



| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೦ | ೧೮ | ಒಟ್ಟೈನ | ಒಟ್ಟಿನ |
| ೨೪ | ೮ | **ಮೂಡಿರವವು** | **ಮೂಡಿರುವವು** |
| ೪೨ | ೮ | ವರಿಸಲೆಂದು | ಹರಿಸಲೆಂದು |
| ೪೭ | ೧೯ | ಭುವನವ | ಭುವನವು |
| ೪೭ | ೨೩ | ಅತ್ತಣೆಯಿಂದ | ಅತ್ತಣಿಂದ |
| ೫೨ | ೧೪ | ಧ್ಮಾನದಲ್ಲಿ | ಧ್ಯಾನದಲ್ಲಿ |
| ೬೦ | ೨೦ | ಹಾಗೆ | ಹಾಗೇ |
| ೬೫ | ೭ | ಹತ್ತಿತು: | ಹತ್ತಿತು. |
| ೮೧ | ೩ | ಸ್ಖಲಮುಮಂ | ಸ್ಖಲನಮುಮಂ |
| ೮೮ | ೧ | ದೇವಿ | ದೇವೀ |
| ೯೫ | ೩ | ವರ್ತಮಾನವನು | ವರ್ತಮಾನವನ್ನು |
| ೧೦೯ | ೧೪ | ದಿನ | ದೀನ |
| ೧೨೨ | ೩ | ಚಂದ್ರಿಕಾಮನವನ್ನು | ಚಂದ್ರಿಕಾಗಮನವನ್ನು |
| ೧೨೨ | ೨೪ | ಬೇಗ | ತಾಬೇಗ |
| ೧೨೩ | ೩ | ಸಖೀಮದಲೇಖಿ, | ಸಖೀಮದಲೇಖೆ |



ಸಂಗೀತ

# ಪ್ರೇಮಲೀಲಾ ನಾಟಕಂ.

## ಪ್ರಥಮಾಂಕಂ

—:(-೦-):—

### ಈಶಸ್ತವನ.

|| ಪದ || ರಾಗ—ಕಮಾಚ್. ತಾಳ—ಆದಿ.

ದೇವಾ ಅಭವಾ ಪಾಲಿಸೈ ||ಪಲ್ಲ|| ಅಮರವಿನುತನೆ ವಿಮಲ ಚರಿತನೆ | ಅಮಿತ ಮಹಿಮಾ | ನಮಿಸುವೆವೈ ||ಅ. ಪಲ್ಲ||

ಶಿಷ್ಟಪರಿಪಾಲಕಾ | ದುಷ್ಟಸಂಹಾರಕಾ ||

ಶ್ರೇಷ್ಠನೆ ನಿನ್ನನು ಪ್ರಾರ್ಥಿಪೆವೈ ||೧||

||ಪದ|| ಬ್ಯಾಂಡ್‌ಚಾಲೀ.

ಗೌರೀರಮಣಾ | ಕರುಣಿಸು ಸುರ ಮುನಿ ನರಗಣ ವರವಂದಿತ ಚರಣಾ | ದುರಿತ ಹರಣಾ ||ಪ|| ಮಾರಹರಾ ಭವಜಲನಿಧಿತರಣಾ | ವರಪದಪಂಕಜಲೀನೋದ್ಧರಣಾ | ಕರುಣಾಭರಣಾ | ಉರಗಾಭರಣಾ | ಕರಜೋಡಿಸಿ ನಾಂ ಪ್ರಾರ್ಥಿಪೆ ಸುಗುಣಾ | ನಿರುತಂ ಪೊರೆವುದು ವರಗಿರಿಶಯನಾ | ಪುರಸಂಮರ್ದನಾ ||೧||

ನಟಿ:—ವಧೂವರರ ನಿಶ್ಚಲವಾದ ಪ್ರೇಮಭಾವವನ್ನು ಪರೀಕ್ಷಿಸಿ, ನಿಜವಾದಪ್ರೇಮವುಳ್ಳವರಿಗೆ ಅಂತ್ಯದಲ್ಲಿ ಅಪಾರಸುಖವನ್ನೀಯುವ ಸತ್ಯಶ್ರೀ ಪರಮೇಶ್ವರನಿಗೆ ಜಯಜಯಕಾರವಿರಲಿ! ಕಲ್ಯಾಣ ಕಲ್ಯಾಣ. (ಇಷ್ಟರಲ್ಲಿ)

(ಪಡದೆಯೊಳಗೆ) ನಿಜ. ವಸಂತಸಮಯವಿರುವದರಿಂದ ವನವಿಹಾರಕ್ಕೆ ಇದು ತಕ್ಕ ಕಾಲವು. ಹೋಗೋಣ ನಡೆಯಿರಿ.

ಎಡಬಲದವರು:—ಸಖಿಯರೇ ಇದೇನು? ವನವಿಹಾರದ ಪ್ರಸ್ತಾಪ ನಡೆದದೆ?

ನಟಿ:—ಗೆಳತಿಯರೆ, ಈ ಮೊದಲು ನಿಶ್ಚಯಿಸಿಕೊಂಡಂತೆ ಹಂಸ ರಾಜ ಕುಮಾರಿಯಾದ ಮಹಾಶ್ವೇತೆಯು ತರಲಿಕಾ ಪ್ರಮೋದಿನಿಯ ರೊಡನೆ, ಚಿತ್ರರಥವನದೊಳಗಿನ ಅಚ್ಛೋದ ಸರೋವರಕ್ಕೆ ಸ್ನಾನಕ್ಕೆಂದು ಹೊರಟಂತೆ ಕಾಣುತ್ತದೆ.

ಎಲ್ಲರೂ:—ನಡೆಯಿರಿ ಹಾಗಾದರೆ, ನಾವೆಲ್ಲರೂ ನಮ್ಮ ನಮ್ಮ ಕೆಲಸಕ್ಕೆ ಹೋಗೋಣ. (ಹೋಗುವರು)

---

## ಮೊದಲನೆಯ ಪ್ರವೇಶ.

ಸ್ಥಳ—ಚಿತ್ರರಥವನವು:—

(ಮಹಾಶ್ವೇತಾ, ತರಲಿಕಾ, ಪ್ರಮೋದಿನಿಯರು ಪ್ರವೇಶಿಸುವರು)

ಮಹಾ:—ಸಖಿಯರೇ, ನೋಡಿದಿರಾ! ಈ ವನವು ಎಷ್ಟು ಮನೋಹರವಾಗಿ ಕಾಣುವದು. ಅಗೋ....

ಪ್ರಮೋದಿನಿ:—ಬೇಡ ಬೇಡ ಮುಂದಕ್ಕೆ ಹೋಗಬೇಡವೆಂದು ನಿನಗೆ ಎಷ್ಟುಸಾರೆ ಹೇಳಬೇಕು?

ಮಹಾ: —ಅದೇಕೆ ಹೋಗಬಾರದು?

ಪ್ರಮೋ:—ನಿನ್ನ ದೃಷ್ಟಿಗೆ ಬಿದ್ದೇ ಇಲ್ಲವೇನು? ಅಗೋ ಸ್ವಲ್ಪ ಮುಂದತ್ತ ನೋಡು, ಚಂದನಕ್ಕೆ ಸುತ್ತುಹಾಕಿಕೊಂಡಿರುವ ಸರ್ಪವು ಹೇಗೆ ಕಾಣುತ್ತದೆ! ಈ ವೇಳೆಯಲ್ಲಿ ನೀನು ಮುಂದಕ್ಕೆ ಹೋದರೆ ಅದನ್ನು ಬಿಟ್ಟುನಿನಗೆ ಸುತ್ತುಹಾಕುವದೇ ನಿಶ್ಚಯು.

ಮಹಾ:—ಸಖೀ ಪ್ರಮೋದಿನಿ, ನಿನಗೆ ಹುಚ್ಚೆಯೆನ್ನಬೇಕೋ ಜಾಣೆಯೆನ್ನಬೇಕೋ?

ಪ್ರಮೋ:—ಮುಂದಕ್ಕೆ ಹೋಗಿ ನೋಡು ಹಾಗಾದರೆ! ಯಾರು

ಹುಚ್ಚರೆನ್ನುವದು ತಾನೇ ತಿಳಿಯುತ್ತದೆ!

ಮಹಾ:—ಆ ಬಡಪ್ರಾಣಿಯು ಘಮಘಮಿಸುತ್ತಿರುವ ಚಂದನವನ್ನು ಬಿಟ್ಟು ನನ್ನ ಕಡೆಗೆ ಬರುವದಾದರೂ ಯಾವ ಕಾರಣದಿಂದ?

ಇಬ್ಬರೂ:—ಚಂದನಕ್ಕಿಂತಲೂ ನಿನ್ನ ಶರೀರಸುವಾಸನೆಯು ಅಧಿಕವಾಗಿರುವದರಿಂದ!

ಮಹಾ:—ನಡೆಯಿರಿ ಹಾಗಾದರೆ, ಆ ಶಿಲಾತಲದ ಮೇಲೆ ನೆಲೆಸಿರುವ ಮಹೇಶ್ವರ ಮೂರ್ತಿಗೆ ನಮಸ್ಕರಿಸಿ ಬರುವಾ! (ಹೋಗಿ ಎಲ್ಲರೂ ನಮಸ್ಕರಿಸುತ್ತಿರಲು)

ಪ್ರಮೋ:—ಸಖೀ ಮಹಾಶ್ವೇತೆ, "ಪಾರ್ವತೀ ದೇವಿಯವರಿಗೆ ನೀವು ಹ್ಯಾಗೋ ಹಾಗೆ ನನಗೂ ಅನುರೂಪ ವರನು ದೊರೆಯುವಂತೆ ಮಾಡಬೇಕೆ"ಂದು ಮಹೇಶ್ವರ ಮೂರ್ತಿಗೆ ನಮಸ್ಕರಿಸು.

ಮಹಾ:—ಅದನ್ನು ನೀನೇನು ಹೇಳುವಿ? ಸರಿ ದೂರತ್ತ! (ಪ್ರದಕ್ಷಿಣೆ ಹಾಕಹತ್ತುವಳು)

ಪ್ರಮೋ:—ಗೆಳತೀ ತರಲಿಕೆ, ಅಗೋ ನೋಡು! ಮಹಾಶ್ವೇತೆಯು ಈಗ ನಿಶ್ಚಯವಾಗಿ ಉಪವರಳಾಗಿ ತೋರುವಳು. ಯಾವ ಮಹಾಪುರುಷನ ಭಾಗ್ಯೋದಯವಾಗುತ್ತದೆಯೋ ನೋಡಬೇಕು. ಇವಳನ್ನು ಪರಿಗ್ರಹಿಸಿದವನೇ ಧನ್ಯನು.

ತರಲಿಕಾ:—ಇಂಥ ರೂಪವತಿಯ ವಿವಾಹವು ದೇವಲೋಕದ ಯಾವನೊಬ್ಬ ಪುಣ್ಯ ಪುರುಷನಿಗೆ ಯೋಗ್ಯವೇ ಹೊರತು ಅನ್ಯರಿಗೆ ಅಸಾಧ್ಯವು.

ಪ್ರಮೋ:—ಶ್ವೇತ ಕಮಲಗಳನ್ನು ವಿಕಾಸಿಸಲಿಕ್ಕೆ ಸೂರ್ಯನ ಹೊರತು ಅನ್ಯರಾರು ಯೋಗ್ಯರಾಗುವರು?

ತರಲಿಕಾ:—ಅದೆಲ್ಲ ಸರಿ; ಆದರೆ ಸದ್ಯಕ್ಕೆ ಇವಳ ಲಗ್ನದ ಪ್ರಸ್ತಾಪವೇ ಹೊರಡುವಂತಿಲ್ಲ.

ಪ್ರಮೋ:—ಅದೇಕೆ?

ತರಲಿಕಾ:— ನೀನು ಕೇಳಿಲ್ಲವೇನು? ಕಾದಂಬರಿಯ ಲಗ್ನವೂ, ತನ್ನ ಲಗ್ನವೂ ಒಂದೇ ದಿವಸ ಆಗಬೇಕೆಂದು ಇವಳ ಮನಸ್ಸಿನಲ್ಲಿರುವದು.

ಪ್ರಮೋ:—ಈ ಸಂಗತಿಯು ನಿನಗೆ ಹೇಗೆ ತಿಳಿಯಿತು?

ತರಲಿಕಾ:—ನನಗೆ ತಾಯಿಯವರು ಹೇಳಿದರು.

ಮಹಾ:—ಸಖೀ ತರಲಿಕೆ, ನಿಮ್ಮ ನಿಮ್ಮೊಳಗೆ ಏನೇನೋ ಏಕಾಂತವು ನಡೆದಿರುವದಲ್ಲ! ಆ ಕಿವಿಮಾತುಗಳನ್ನು ನನಗೆ ಹೇಳುವದಿಲ್ಲವೇನು?

ಪ್ರಮೋ:—ನಿನ್ನ ನಮಸ್ಕಾರ ಚಮತ್ಕಾರಗಳೆಲ್ಲ ಇನ್ನೂ ತೀರಿಲ್ಲವೇನು? ಅನುರೂಪವರನು ದೊರೆಯುವವರೆಗೆ ಇಲ್ಲಿಯೇ ತಪಸ್ಸು ಮಾಡುತ್ತ ಕೂಡ್ರುವೆಯಾ!

ಮಹಾ:—ಎಲ್ಲಾ ತೀರಿತು. ಇಗೋ ಬಂದೆ; (ಹತ್ತರ ಬಂದು) "ಕಾದಂಬರಿಯ ಮತ್ತು ತನ್ನ" ಹೀಗೆ ಏನೇನೋ ಕುಸು ಕುಸು ಮಾತಾಡುತ್ತಿದ್ದಿರಲ್ಲ! ಅದೇನು?

ಪ್ರಮೋ:—ಮತ್ತೇನೂ ಇಲ್ಲ; ಕಾದಂಬರಿಯ ಲಗ್ನದ ಮುಹೂರ್ತವು ನಿಶ್ಚಯಿಸಲ್ಪಟ್ಟಿರುವ ಸಂಗತಿಯನ್ನು ಇವಳು ನನ್ನ ಮುಂದೆ ಹೇಳಿದಳು. ನಿನ್ನ ಕಿವಿಗಳೇಕೆ ನೆಟ್ಟಗಾದವು?

ಮಹಾ:—ಹಾಗೆ ಎಂದಿಗೂ ಆಗಲಿಕ್ಕಿಲ್ಲ. ನಿನ್ನ ಮಾತನ್ನು ನಾನು ಎಂದಿಗೂ ನಂಬುವವಳಲ್ಲ. ಇರಲಿ ಅಗೋ ನೋಡು, ಆ ಲತಾಮಂಟಪವು ಎಷ್ಟು ಸುಂದರವಾಗಿ ಕಾಣುವದು. ಅದರಲ್ಲಿ ಕುಳಿತು ಹೊಸದಾಗಿ ಕಲಿತ ಎರಡು ಗೀತಗಳನ್ನಾದರೂ ಅನ್ನುವಾ ನಡೆಯಿರಿ.

ಪ್ರಮೋ:—ಗೆಳತೀ ಮಹಾಶ್ವೇತೆ, ಇಷ್ಟು ಅವಸರವೇತಕ್ಕೆ! ಲಗ್ನವಾದಬಳಿಕ ಸತಿಪತಿಗಳೀರ್ವರೂ ಹೊಸ ಹೊಸ ಗೀತಗಳನ್ನು ಅಂ....

ಮಹಾ:—(ನಡುವೇ ಬಾಯಿಹಾಕಿ) ಇದೇನ್‌ರೇ ಯಾವಾಗಲೂ ನಿಮ್ಮದು ಚೇಷ್ಟೆಯೇ ಇರುತ್ತದೆ. ಹೋಗಿರಿ, ನಿಮ್ಮ ಸಂಗಡ ನಾನು ಮಾತಾಡುವದೇ ಇಲ್ಲ. ನಾನೊಬ್ಬಳೇ ಈ ವನಸೌಂದರ್ಯವನ್ನು

ನೋಡುವೆನು. (ಎಂದು ಹೋಗುವಳು)

ಪ್ರಮೋ:— ಓಹೋ ಮಹಾಶ್ವೇತೇ ಮಹಾಶ್ವೇತೆ, ತುಸು ತಡೆ, ಒಬ್ಬಳೇ ಹೋಗಬೇಡ; ನಾನು ಹೇಳುವ ಮಾತನ್ನಾದರೂ ಕೇಳು. ಈ ವನದಲ್ಲಿ ಕಾಮದೇವನ ಸಂಚಾರವಿರುವದೆಂದು ಹೇಳುತ್ತಾರೆ. ರತಿಯೆಂದು ತಿಳಿದು ಅವನು ನಿನ್ನನ್ನು ಎತ್ತಿಕೊಂಡು ಹೋದರೆ ನಾವೇನು ಬಿಡಿಸಿಕೊಳ್ಳಲಿಕ್ಕೆ ಬರುವವರಲ್ಲ!

ತರಲಿಕಾ:—ಅವ್ವಯ್ಯ ನಿಶ್ಚಯವಾಗಿ ಹೋದಳು. ಅವಳನ್ನು ಹುಡುಕಿಕೊಂಡು ಹೋಗಲಿಕ್ಕೆ ಬೇಕು. ಇಲ್ಲದಿದ್ದರೆ ತಾಯಿಯವರ ಕಡೆಯಿಂದ ಸಿಟ್ಟುಮಾಡಿಸಿಕೊಳ್ಳಬೇಕಾದೀತು.

ಪ್ರಮೋ:—ಹೌದು ಹೌದು! ಹಾಗಾದರೆ ನೀನು ಇತ್ತಲೀಮಾರ್ಗವಾಗಿ ನಡೆ; ನಾನು ಅತ್ತ ಕೇತಕೀವನದೊಳಗಿಂದ ಹಾಯ್ದು ಬರುತ್ತೇನೆ.

ತರಲಿಕಾ:—ಬೇಗ ನಡೆ; ತಾಯಿಯವರ ಸ್ನಾನವು ತೀರುತ್ತಬಂದಿರಬಹುದು. (ಇಬ್ಬರೂ ಹೋಗುವರು)

ಮಹಾಶ್ವೇತೆ:—(ಮುಂದೆ ಬಂದು) ಪ್ರಮೋದಿನಿಯು ಠಕ್ಕತನವಾದರೂ ಎಷ್ಟು! ಕಾದಂಬರಿಯ ಲಗ್ನಮುಹೂರ್ತವು ನಿಶ್ಚಯವಾಗಿದೆಯಂತೆ; ಮತ್ತು ಈ ವನದಲ್ಲಿ ಕಾಮದೇವನು ಸಂಚರಿಸುತ್ತಿರುವನಂತೆ; ಈ ಪರಿ ಸುಳ್ಳುಮಾತನಾಡುವವಳನ್ನು ನಾನು ಎಲ್ಲಿಯೂ ಕಂಡಿಲ್ಲ. ಆಗಲಿ ಅವರು ಅತ್ತ ನನ್ನನ್ನು ಹುಡುಕುತ್ತ ತಿರುಗಾಡಲಿ, ಇತ್ತ ನಾನೊಬ್ಬಳೇ ಈ ವನಸೌಂದರ್ಯವನ್ನು ನೋಡುವೆನು; (ತಿರುಗುತ್ತ ತಿರುಗುತ್ತ ಮಧ್ಯದಲ್ಲಿಯೇ ವಾಸನೆತೆಗೆದುಕೊಂಡು ಆನಂದದಿಂದ) ಅಹಹ!

||ಪದ|| ರಾಗ —ಜುಂಜೂಟ. ತಾಳ—ಝಾಪ.

ಗಂಧವಿದೆಲ್ಲಿಯದಿಹುದೋ ಸಂತೋಷಪ ಗಂಧವಿದೆಲ್ಲಿಯದಿಹುದೋ
||ಪ|| ಕುಂದಪುಷ್ಪಂಗಳ ಸಂದೋಹದಿಂದುಂಟಾಗಿಹ | ಗಂಧಾಶಯುವಿಂದೆಲ್ಲವದೊಂದಾಗಿ ತಾಂ ಬಂದಿರ್ಪುದೊ ||೧|| ಸುಂದರ ಭ್ರಮ

ರವಾ ಪುಷ್ಪಂಗಳ ಶೋಧಿಸಲು | ಒಂದೇ ಮನದಿಂದೋಡುತ
ಲಾನಂದದಿಂಸಾಗಿರ್ಪುದು||೨||ಅಲ್ಲವು ಭೂಲೋಕದ ಸದ್ಗಂಧವಿದಲ್ಲ
ವು| ಸಲ್ಲಲಿತವಾಗಿರುತಿಹ ಸುರಲೋಕದಿಂ ಬರುತಿರ್ಪುದೋ ||೩||

ಅಹಹ! ಈ ಸುವಾಸನೆಯು ಯಾವ ಕಡೆಯಿಂದ ಬರುತ್ತಿರ ಬಹುದು. ಹಾ! ಈ ಭ್ರಮರವು ಆ ಪುಷ್ಪಶೋಧನಾರ್ಥವಾಗಿಯೇ ಹೊರಟಂತೆ ತಿಳಿಯುತ್ತದೆ. ಅಂದಮೇಲೆ ಇದನ್ನು ಬೆನ್ನಟ್ಟಿಹೋದರೆ ತಾನೇ ಗೊತ್ತಾಗುತ್ತದೆ. (ಹೋಗಹೋಗುತ್ತ ಒಮ್ಮೆಲೇ ಬೆದರಿ ಹಿಂದಕ್ಕೆ ಸರಿದು) ಅವ್ವಯ್ಯ! ಯಾರಿವರು ಈ ವನದಲ್ಲಿ? ಇಲ್ಲಿ ಕಾಮದೇವನು ಸಂಚರಿಸುತ್ತಿರುವನೆಂದು ಪ್ರಮೋದಿನಿಯು ಈ ಮೊದಲೇ ನನಗೆ ಹೇಳಿದ್ದಳು. ಅವನೇ ಆಗಿರಬಹುದೇನು? (ನೋಡಿ) ನಿಶ್ಚಯು, ಈತನೇ ಕಾಮದೇವನು. ಅಹಹ! ಎಂಥ ದಿವ್ಯರೂಪವಿದು! ಕಾಮದೇವನಷ್ಟು ಸುಂದರ ಪುರುಷರು ಮೂರು ಲೋಕಗಳಲ್ಲಿ ಇಲ್ಲವೆಂದು ಹೇಳುತ್ತಾರೆ; ಅದಾದರೂ ನಿಜವೇ ಸರಿ. ಆದರೆ ತ್ರಿನೇತ್ರಧಾರಿಯಾದ ಪರಮೇಶ್ವರನು ತನ್ನ ಉರಿಗಣ್ಣಿಂದ ಅವನನ್ನು ಸುಟ್ಟು ಭಸ್ಮಮಾಡಿರುವನೆಂದು ಹೇಳುತ್ತಾರೆ. ಈ ಮಾತಿನಿಂದ ಮಾತ್ರ ಸಂಶಯುಬರುತ್ತದೆ. ಹಾಗಾದರೆ ಇವನು ಯಾರಿರಬಹುದು?( ಯೋಚಿಸಿ)ಅವನ ಮಿತ್ರ ವಸಂತನು ವಿರಹ ತಾಪದಿಂದ ಹೀಗೆ ವೇಷಧಾರಿಯಾಗಿ ಈ ವನದಲ್ಲಿ ಸಂಚರಿಸುತ್ತಿರಬಹುದೇನು? ಹಾ! ಇತ್ತಕಡೆಗೇ ಬಂದನು. (ಹೀಗೆ ಮಾತನಾಡುತ್ತ ಬಳ್ಳಿಯುಮರೆಗೆ ಅಡಗಿಕೊಳ್ಳುವಳು; ಪುಂಡರೀಕನು ಹೊರಗೆ ಬರುವನು)

ಪುಂಡರೀಕ:—ಇಂದು ಚತುರ್ದಶಿಯಿರುವದರಿಂದ ಕೈಲಾಸನಾಥನ ಪೂಜೆಗೋಸ್ಕರ ಮಿತ್ರನ ಸಂಗಡ ನಂದನವನದೊಳಗಿಂದ ಹಾಯ್ದು ಈ ಭೂಲೋಕಕ್ಕೆ ಬರುತ್ತಿರುವಾಗ:—

||ಪದ||ರಾಗ—ಅಸಾವೇರಿ. ತಾಳ— ಆದಿ.

ನಂದನವನದೇವಿಯು ತಾನಂದದಿಂದಾದರಿಸಿದಳೆನಗೆ || ಪಲ್ಲ ||

ಕೋಮಲಹಸ್ತದಿಂ ಕರ್ಣದೊಳಿರಿಸಲ್ || ಪ್ರೇಮದೆ ನವಮಂಜರಿ
ಯಂ ನೀಡಿದಳ್ || ೧ || ಪರಿಚಯವಿಲ್ಲದಲೀಪರಿ ಮುದಿಸಲ್ ||
ಮರಳಿದೆ ಲಜ್ಜಿತನಾಗುತೆ ಭರದಿಂ ||೨||

ಮಿತ್ರ ಕಪಿಂಜಲನು ಈ ಪುಷ್ಪಮಂಜರಿಯನ್ನು ನಂದನದೇವಿಯಿಂದ ದೊರಕಿಸಿ, ನಾನು ಬೇಡಬೇಡವೆಂದರೂ ಅತ್ಯಾಗ್ರಹದಿಂದ ನನ್ನ ಕರ್ಣದಲ್ಲಿರಿಸಿದನು. ಆಗಿನಿಂದ ನನ್ನ ಮನಸ್ಸಿನಲ್ಲಿ ಏನೇನೋ ಒಂದು ತರದ ಅಪೂರ್ವವಾದ ಉತ್ಸುಕತೆಯು ಉತ್ಪನ್ನವಾಗಹತ್ತಿದೆ. ಇದರ ಕಾರಣವೇನಿರಬಹುದು? (ತುಸು ವಿಚಾರಿಸಿ) ಇರಲಿ, ಈ ತರದ ರಮ್ಯವಾದ ವನವನ್ನು ನಾನು ಎಲ್ಲಿಯೂ ನೋಡುತ್ತಿರಲಿಲ್ಲ. ನನ್ನ ಮಿತ್ರನಾದರೂ ಪೂಜೆಗೋಸ್ಕರ ಪುಷ್ಪಗಳನ್ನೆತ್ತುತ್ತಿರುವನು. ಅವನ ಕೆಲಸ ಮುಗಿಯುವವರೆಗೆ ಈ ವನಶೋಭೆಯನ್ನು ಮನದಣಿಯೆ ನೋಡುವೆನು. (ಅತ್ತಿತ್ತ ತಿರುಗಾಡಹತ್ತುವನು)

ಮಹಾಶ್ವೇತೆ:— ಛೀ ಛೀ ಇವನು ಮನ್ಮಥನೂ ಅಲ್ಲ, ವಸಂತನೂ ಅಲ್ಲ; ಅವರಿಬ್ಬರನ್ನು ಲಜ್ಜಿಸತಕ್ಕಂಥ ಯಾವನೋ ಒಬ್ಬ ಋಷಿಪುತ್ರನಂಬಂತೆ ಕಾಣುತ್ತಾನೆ. ಅಹಹ! ಎಂಥ ದಿವ್ಯರೂಪವಿದು. ದೇವಾ, ಈ ಸರ್ವಾಂಗಸುಂದರನಿಗೆ ಈ ವನವಾಸದ ಕಷ್ಟವಾದರೂ ಹೇಗೆ ಸೇರುತ್ತಿರಬಹುದು? (ಅವನ ಕಡೆಗೆ ನೋಡುತ್ತ ನಿಲ್ಲುವಳು)

ಪುಂಡರೀಕ:—ಅಹಹ! ಆನಂದ ಆನಂದ! ಪರಮಾನಂದ ಎಲ್ಲಿ ನೋಡಿದರೂ ಆನಂದವೇ ತುಂಬಿಕೊಂಡಿರುವದಲ್ಲ!!

||ಪದ||ರಾಗ— ಮುಖಾರಿ. ತಾಳ-ಆದಿ.

ಮತ್ತಮಧುಪಗಳವು ವನದೆ ಚರಿಸುತಿರ್ಪವು ||ಪ|| ಅತ್ತಲವುಗಳಿಂ
ಚರವದು ಕೇಳಬರುವದು ||೧|| ರಾಜಹಂಸಗಳವು ತ್ವರದೆಯೋಡು
ತಿರ್ಪವು || ಮಾಜದಂತೆ ಕೋಗಿಲೆಗಳು ಗಾನವಾಳ್ಪವು ||೨|| ಸೊಕ್ಕಿ
ಬೆಳೆದ ಗಿಡಗಳೆಲ್ಲ ಹಸರುಮುಳಿವವು || ದಿಕ್ಕುದಿಕ್ಕಿಗೆಲ್ಲ ಶೋಭೆ

ಯುಂಟುಮಾಳ್ಪವು||೩||ತಕ್ಕ ಮಂದಮಾರುತನವಸುಳಿಯುತಿರ್ಪನು|
ಚಿಕ್ಕ ದೊಡ್ಡ ಪ್ರಾಣಿಗಳಿಗೆ ಸುಖವನೀವನು ||೪|| ಮದನಸದನ
ವಿಹುದಿದೆಂದು ನಿಜದೆತಿಳಿಯುವೆಂ||ಮುದದೆಯುವನು ರತಿಯುಸಹಿತ
ವಾಸಗೊಂಡಿಹಂ ||೫|| ತರುಣಜನರ ಮನವದಿಲ್ಲಿ ತಾಳಲಾರದು ||
ಸರಸವಾದ ಶಾಂತಮುನಿಯ ವೃತ್ತಿನಲ್ಲದು ||೬||

ಒಟ್ಟಿನಮೇಲೆ ಇಂದ್ರನ ನಂದನವನದ ಉಪಹಾಸಮಾಡುವದ ಕ್ಕಾಗಿ, ಚಿತ್ರರಥಗಂಧರ್ವರಾಜನು ಈ ವನವನ್ನು ನಿರ್ಮಾಣಮಾಡಿರುವ ನೆಂಬದಕ್ಕೆ ಸಂಶಯವಿಲ್ಲ. ಆದ್ದರಿಂದಲೇ—

||ಸಾಕಿ||

ಮಧುಮಾಸವು ತಾಂ ಮೂರ್ತಿಸಿತಿದರೊಳ್ ನಿಜವಿದು ಸಂಶಯ
ವಿಲ್ಲಂ||ಮದನಶರಂಗಳ್ ಜನಿಸುತಲಿವೆ ತಾವಂದದೆ ತಪ್ಪದಲೆಲ್ಲಂ||
ವಿದಿಸಿದೆಯೆನಗಿಂತು || ಹೃದಯಕೆ ಶರನೆಟ್ಟಂ ಕಂತು ||೧||

ಮಹಾಶ್ವೇತೆ:—ಪರಮತೇಜಸ್ವಿಯಾದ ಈ ಮುನಿಕುಮಾರನ ಮೇಲೆ ನಾನು ನಿಶ್ಚಲವಾದ ದೃಷ್ಟಿಯನ್ನಿಡುವದು ಒಳಿತಲ್ಲ. (ಮುಖವನ್ನು ತಿರುಗಿಸಿ) ಅವ್ವಯ್ಯ! ಇದೇನೇ ಈ ಕಡೆಗೂ ಕಾಣಿಸುವನು! ಒಂದಾವೃತ್ತಿ ಹೃದಯಮಂದಿರದಲ್ಲಿ ನೆಲೆಗೊಂಡಮೇಲೆ ಕೇವಲ ದೃಷ್ಟಿಯನ್ನು ತಿರುಗಿಸಿದರೆ ಆಗುವದೇನು? ಇತ್ತಲೀಮಾರ್ಗವಾಗಿ ಹೋಗಬೇಕೆಂದರೆ ಇಲ್ಲಿಯೂ ನಿಂತಿರುವನು. ಅಗಲಿ ಇವನು ಈ ಸ್ಥಳವನ್ನು ಬಿಟ್ಟು ಹೋದ ಬಳಿಕ ನಾನು ಹೋಗುವದುಚಿತವು.

ಪುಂಡರೀಕ:—ಪರಸ್ಪರ ಈರ್ಷೆಯಿಂದ ವಿಸ್ತಾರ ಹೊಂದತಕ್ಕ ವೃಕ್ಷ, ಮತ್ತು ಸ್ವಚ್ಛಂದವೃತ್ತಿಯಿಂದ ಈ ವೃಕ್ಷದ ಮೇಲೆ ಆರೋಹಣ ಮಾಡತಕ್ಕ ಈ ಲತೆ, ಇವುಗಳನ್ನು ನೋಡಿ ನನಗೆ:—

||ಪದ|| ರಾಗ—ಬೆಹಾಗ. ತಾಳ—ಆದಿ.

ವಿಹರಿಪವೀ ತರುಲತೆಗಳು ತಾವ್ ಯುವತಿ-ಯುವಕರೆಂದೆನಿಸುತೆ
ವನದೊಳ್ ||ಪಲ್ಲ||

ತರುನಿಜಕೋಮಲ ಶಾಖಾಕರದಿಂ |
ಸುರುಚಿರ ಪುಷ್ಪಿತ ಲತೆಗತಿಭರದಿಂ ||
ಸರಸದೆಯಾಲಿಂಗನಗುಡುತಂ |
ಚಿರಸುಖವನುಭವಿಸುವದೈ ಸತತಂ ||೧|| ಹೀಗೆಭಾಷವಾಗುವದು. ಈ ವೃಕ್ಷ ವೊಂದೇಯಾಕೆ? ಈ ವನದೊಳಗಿನ ಪಶುಪಕ್ಷಿಗಳು ಸಹ ತಮ್ಮ ತಮ್ಮ ಕಾಮಿನಿಯರ ಸಂಗಡ ಸುಖವನ್ನನುಭವಿಸುತ್ತಿರುವವು. ಧನ್ಯ ಧನ್ಯ! ಪ್ರಿಯವೃಕ್ಷವೇ ಇಂದಿಗೆ ನೀನೇ ಧನ್ಯ! (ನೋಡುತ್ತ ತಿರುಗಾಡುತ್ತಿರುವನು.)

ಮಹಾ:—ಈ ವರೆಗೆ ದೃಷ್ಟಿಯುಮಾತ್ರ ಚಂಚಲವಾಗಿತ್ತು. ಈಗ ಮನಸ್ಸು ಸಹ ನನ್ನ ಸ್ವಾಧೀನದಲ್ಲಿಲ್ಲದಂತಾಗಿ, ಈ ಮುನಿಕುಮಾರನ ಹತ್ತರ ಹೋಗಿ ಇವನ ಸಂಗಡ ವಿನೋದಪರ ಭಾಷಣಮಾಡಬೇಕೆಂದು ಬಯಸುವದು. ಈ ಮೊದಲು ಪ್ರಮೋದಿನಿಯು ಹೇಳಿದ ಮೇರೆಗೆ ಇದೆಲ್ಲ ಕಾಮದೇವನ ಚೇಷ್ಟೆಯಾಗಿರಬಹುದೇನು?

ಪುಂಡ:—ಅಹಹ! ಏನಾಶ್ಚರ್ಯವಿದು? ಈ ಆಮ್ರವೃಕ್ಷವು ತನ್ನ ಶಾಖಾಕರಗಳಿಂದ ಸಮೀಪದಲ್ಲಿರುವ ಮಲ್ಲಿಕಾ ಲತೆಗೆ ಬಾ, ಬಾ, ಎಂದು ಅತ್ಯಾಗ್ರಹಪೂರ್ವಕವಾಗಿ ಸೂಚಿಸುತ್ತದೆ. ಹೀಗಿದ್ದರೂ ಈ ಲತೆಯು ಆಲಿಂಗನಕೊಡದೆ ಸುಮ್ಮನೆ ಇರುವದಲ್ಲ? ನಿಜ; ಅಂತರಂಗದಲ್ಲಿ ಈ ತರದ ಅಪೇಕ್ಷೆ ಇದ್ದರೂ, ಅಪರಿಚಿತ ಪುರುಷನೊಡನೆ ಒಮ್ಮೆಲೇ ರಮಿಸುವದು ಯೋಗ್ಯವಲ್ಲವೆಂದು ಸುಮ್ಮನಿರುವಂತೆ ತೋರುತ್ತದೆ. (ಯೋಚಿಸಿ) ಛೀ ಛೀ! ಹಾಗಿರಲಿಕ್ಕಿಲ್ಲ:—

||ಪದ|| (ಕಿತಿಕೋಮಲತನುತನುಲತಿಕಾ ಎಂಬಂತೆ)

ಅತಿಯೋಚಿಸುತಿರುತಿಹದೀ ಮಾಧವೀಲತೆ ||ಪಲ್ಲ||
ಆತುರವನು ಮಾಡದಲೆ ಮೌನದಿಂದೆತಾ ||ಅ.ಪ||
ಸನ್ನಿಧವಾಗಿರುತಿರುವ | ಉನ್ನತ ವೃಕ್ಷಂಗಳೊಳು ||

ಚೆನ್ನಿಗವಾದುದನರಿಸಿ | ವರಿಸಲಿಂತುತಾ ||೧||

ಆದ್ದರಿಂದ ಈ ಕಾಲದಲ್ಲಿ ಇದರ ಮನಸ್ಸು ನಿಶ್ಚಿತವಾದದ್ದಿಲ್ಲ. ಅಂದ ಮೇಲೆ ಈ ಕಾರ್ಯವನ್ನು ಕೊನಿಗಾಣಿಸಲಿಕ್ಕೆ ಒಬ್ಬರು ಸಖೀಸ್ಥಾನವನ್ನು ಕೈಕೊಳ್ಳಲಿಕ್ಕೆ ಬೇಕು. ಒಳ್ಳೇದು, ಈ ಲತೆಯು ಮುಂದೆ ಏನು ಮಾಡುತ್ತದೆಂಬದನ್ನು ನೋಡುತ್ತ ನಿಲ್ಲುವೆನು.

ಮಹಾ:—ಹಾ! ಕುಸುಮಾಯುಧಾ ಮನ್ಮಥಾ! ಇದೇ ನಿನ್ನ ಪುರುಷಾರ್ಥವೇನು?

||ಪದ|| ("ಪನಿಯುಭರನಾವ್ಯೈತೋ" ಎಂಬಂತೆ

ಮುನಿಸುತನಿಗೆ ಸಲೆ ಭ್ರಾಂತಳಾದೆ ನಾನು ||ಪ||

ಅನುಪಮ ಸುಂದರ ರೂಪವನೆನ್ನಯ |

ಘನ ನಯನದೊಳಿರಿಸಿ ನಾಂ ||೧|| ಭ್ರಾಂತ—

ನುಡಿಯಲು ಮುನಿಯೊಳ್ ಹಾತೊರೆವುದು ಮನ |

ತಪಿಯುದು ತನುಮದನಾ ||೨|| ಭ್ರಾಂತ—

ಪುಂಡ:— ಈ ಮಲ್ಲಿಕಾಲತೆಯು ಮಾವಿನ ಮರವನ್ನೇ ವರಿಸ ಬೇಕೆಂದು ನಿಶ್ಚಯಿಸಿರುವಂತೆ ತಿಳಿಯುತ್ತದೆ. ಆದರೆ ಅನುಮಾವನ್ನೇಕೆ ಮಾಡುತ್ತಿರಬಹದು? (ತುಸು ಯೋಚಿಸಿ) ಹಾ! ತಿಳಿಯಿತು ಅದು ತನ್ನನ್ನು ಪರಿಗ್ರಹಿಸುವದೋ ಇಲ್ಲವೋ ಎಂಬ ಸಂಶಯದಿಂದ ಓರ್ವ ಸಖಿಯು ಮಾರ್ಗ ಪ್ರತೀಕ್ಷೆ ಮಾಡುತ್ತಿರುವದು. (ನಕ್ಕು) ಒಟ್ಟಿನ ಮೇಲೆ ಸ್ತ್ರೀಯರ ಮನಸ್ಸು ವಿಶೇಷ ಸಂಶಯಾಸ್ಪದವಾದದ್ದಿರುತ್ತದೆಂದು ಹೇಳುತ್ತಾರೆ. ಇದು ನಿಜ, ಈಗ ನಾನು ಸಖೀಸ್ಥಾನವನ್ನು ಕೈಕೊಂಡು ಇವೆರಡುಗಳ ವಿವಾಹಕಾರ್ಯವನ್ನು ನೆರವೇರಿಸುವೆನು. (ಹತ್ತರಹೋಗಿ) ಎಲೌ ಮುಗ್ಧೆ! ಪ್ರಿಯಲತೆ! ಈ ಪ್ರಸಂಗದಲ್ಲಿ ವ್ಯರ್ಥವಾಗಿ ಯಾಕೆ ಲಜ್ಜೆ ಪಡುವೆ? ಇತ್ತನೋಡು ನಿನಗೆ ಆಲಿಂಗನಕೊಡುವದಕ್ಕೋಸ್ಕರ ಈ ಆಮ್ರ ವೃಕ್ಷವು ಭುಜಗಳನ್ನು ಹೇಗೆ ಪಸರಿಸಿದೆ; ಬಾ ಅದರ ಇಚ್ಛೆಯನ್ನು ಪೂರ್ಣ

ಗೊಳಿಸು. (ಲತೆಯ ಒಂದು ಶಾಖೆಯನ್ನು ತಕ್ಕೊಳ್ಳುವನು. ಇಷ್ಟರಲ್ಲಿ ಮಹಾಶ್ವೇತೆಯು ಒತ್ತಟ್ಟಿಗೆ ಸರಿದುನಿಲ್ಲುವಳು. ಪುಂಡರೀಕನು ಅವಳ ಕಡೆಗೆ ಪ್ರಸನ್ನ ಮುದ್ರೆಯಿಂದ ನೋಡುತ್ತ ನಿಲ್ಲುವನು.)

ಮಹಾ:—ಅಹಾ! ನಾನು ಏನು ಕೇಳಿದೆನು? ಕಲ್ಪಲತೆಯ ಕೆಳಗೆ ನಿಂತಿರುವೆನೋ, ಅಥವಾ ಇವನು ಕುಮಾರರೂಪ ಚಿಂತಾಮಣಿಯಿರುವನೊ? ಹೇಗೆ ತಿಳಿಯಬೇಕು? ಮಹಾಸುಂದರನು, ಪರಮತೇಜಸ್ವಿಯು, ಮೇಲಾಗಿ ಬ್ರಹ್ಮಚಾರಿಯೆಂಬಂತೆ ತೋರುತ್ತದೆ. ಹೀಗಿರಲು ಆಲಿಂಗನ ಸುಖವನ್ನು ಹೊಂದುವದಕ್ಕೆ ಏಕೆ ತಡಮಾಡಬೇಕು? (ವಿಚಾರಿಸಿ) ಛೀ ಛೀ ಹಾಗೆ ಮಾಡುವದು ಒಳಿತಲ್ಲ. ಇವನು ಯಾರು, ಎಲ್ಲಿಯುವನು ಎಂಬ ಸಂಗತಿಗಳೇ ಗೊತ್ತಿಲ್ಲದ ಮೇಲೆ ಇಷ್ಟು ಆತುರಪಡುವದು ಉಚಿತವಲ್ಲ.

ಪುಂಡರೀಕ:—ಶುಭ್ರವಾದ ಮುಕ್ತಾಫಲದಂತೆ ತೇಜಸ್ವಿಯಾದ ಈ ಸುಂದರಿಯು ಯಾರಿರಬಹುದು? ಹಾಗೂ ಇವಳು ಈ ಲತೆಯೊಳಗಿಂದ ಒಮ್ಮೆಲೇ ಹೇಗೆ ಉದ್ಭವಿಸಿದಳು? ಒಂದುವೇಳೆ ಈ ಲತೆಯು ನನ್ನ ಕರಸ್ಪರ್ಶದಿಂದ ಶಾಪವಿಮೋಚನವನ್ನು ಹೊಂದಿ, ಸ್ತ್ರೀರೂಪವನ್ನು ಧರಿಸಿರಬಹುದೇನು! ಛೀ ಛೀ ನನ್ನಲ್ಲಿ ಅಷ್ಟೊಂದು ಪುಣ್ಯಪ್ರಭಾವವಾದರೂ ಎಲ್ಲಿರುತ್ತದೆ? ಹಾಗಿದ್ದ ಪಕ್ಷದಲ್ಲಿ ಈ ಮಾಧವೀಲತೆಯು ಅದೃಶ್ಯವಾಗಬಹುದಾಗಿತ್ತು. ಹಾಗಾದರೆ:—

||ಪದ||ರಾಗ—ಭೈರವಿ, ತಾಳ—ರೂಪ,

ಆರಿವಳೀಸುದತಿಮಣಿಯುಬೆದರಿನಿಂದಳು||ಪ||ಸಾರಸಾಕ್ಷಿಯು||ಅ.ಪ||
ವನದದೇವಿನಿಂದಿಹಳೋ| ಜನರಮನವತೋಷಿಸಲು||
ಘನವಸಂತಲಕ್ಷ್ಮಿಯುತಾಂ|ಜನಿಸಿಮುದದೆಬಂದಿಹಳೋ||೧||
ಕುಂದಕುಸುಮಚಯವದೆಲ್ಲ|ಒಂದುಗೂಡಿನೆಲೆಸಿಹುದೋ||
ಇಂದುಕಿರಣವೃಂದವೆಲ್ಲ|ಚಂದದಿನಿತುತೋರುವದೋ||೨||

ತರುಣಜನರಮನವಮುರಿಪ|ಹರಿಯುಸುತನವಾಯಿಯಿದೋ||
ನರರಮನವಸೆಳೆಯಲೆಂದು| ಭರದೆನಿಂದಮೂರ್ತಿಯಿದೋ||೩||

ಇರಲಿ, ಇವಳನ್ನು ವಿಚಾರಿಸಿದರೆ ಈಕೆಯು ಯಾರಿರುವಳೆಂಬದು ತಾನೇತಿಳಿಯುತ್ತದೆ. (ಯೋಚಿಸಿ) ಛೀ ಛೀ! ಈ ಪರಸ್ತ್ರೀಯಳನ್ನು ನಾನಾದರೂ ಯಾತಕ್ಕೆ ವಿಚಾರಿಸಬೇಕು? ಯಾರಾದರೂ ಇರಬಹುದು. ವಿಷಯಾಸಕ್ತಜನರಂತೆ ಪರಸ್ತ್ರೀಯರ ಸಂಗಡ ಮಾತಾಡುವದು ನಮ್ಮಂಥ ವಿರಕ್ತರಿಗೆ ಯೋಗ್ಯವಲ್ಲ. ಹಾಗೂ ಇವಳ ಸಂಗಡಮಾತಾಡಿದರೆ ನಮಗೆ ಲಭಿಸತಕ್ಕ ಲಾಭವಾದರೂ ಏನು? ಇರಲಿ, ಮಿತ್ರಕಪಿಂಜಲನು ಬರುವವರೆಗೆ, ನಾನು ಈ ಆಮ್ರವೃಕ್ಷದ ಕೆಳಗೆ ಕುಳಿತು ಪರಮಾತ್ಮನ ಧ್ಯಾನಮಾಡುವದುಚಿತವು.

("ಸಚ್ಚಿದಾನಂದ" ಎಂದು ಕಣ್ಣು ಮುಚ್ಚಿಕೊಂಡು ಕುಳಿತು ಧ್ಯಾನಮಾಡುವನು.)

ಮಹಾ:—(ನಿಟ್ಟುಸುರುಬಿಟ್ಟು) ಹಾ! ನನ್ನನ್ನು ನೋಡುತ್ತಲೇ ಈ ಮುನಿಕುಮಾರನು ಒಮ್ಮೆಲೇ ಕಣ್ಣುಮುಚ್ಚಿ ಧ್ಯಾನಮಾಡುತ್ತ ಕುಳಿತನಲ್ಲ! ಹೇ, ಕಪಟಿಯಾದ ಮನ್ಮಥನೇ ಮೂರ್ತಿಮಂತವಾಗಿ ನೆಲಿಸಿ ನನ್ನಿಂದ ಏನೇನೋ ಮಾತನಾಡಿಸುವೆಯಲ್ಲ?

||ಪದ||ರಾಗ—ಪಿಲು, ತಾಳ—ಆದಿ.

ವಿನುತವರಸುಶಾಂತವಿರತನಿವಂ||ಪ||
ಮುನಿಸುಕುಮಾರಾಮದನಾಕಾರಾ||ಅ. ಪ||
ಮನವಿರಿಸಲುನಾನಿವನೊಳುಮುದದಿಂ ||
ಇನಿಸುಮದುಸುನೀತಿಯೆನಿಸದು ಹಾ! ||೧||
ಮನ್ಮನದಿಷ್ಟಿಯಂ ತಿಳಿಯುತಲೆನಗೆ ||
ಸನ್ಮುದದೆಸುಹಾಸ್ಯಮಾಳ್ಪನೊ ತಾಂ ||೨||

ಈ ಮಹಾತಪಸ್ವಿಯ ಮೇಲೆ ಮನವಿರಿಸುವದು ಯೋಗ್ಯವಲ್ಲ;

ನನ್ನ ಮನಸ್ಸಿನ ಒಲವು ಒಂದು ವೇಳೆ ಇವನಿಗೆ ತಿಳಿಯಿತೆಂದರೆ ಹಾಸ್ಯ ಮಾಡಬಹುದು; ಆದ್ದರಿಂದ ಇವನ ಧ್ಯಾನವು ಮುಗಿದ ಬಳಿಕ ನಮಸ್ಕರಿಸಿ ಮನೆಗೆ ಹೋಗುವದೇ ಯೋಗ್ಯವು; ಇಲ್ಲದೆ ಹೋದರೆ ಸತ್ಪುರುಷಸಂದರ್ಶನದ ಫಲವು ದೊರೆಯುವ ಬಗೆಹೇಗೆ?

ಪುಂಡರೀಕ:—ಸಚ್ಚಿದಾನಂದಸ್ವರೂಪದ ಧ್ಯಾನಮಾಡುವದಕ್ಕಾಗಿ ಕಣ್ಣು ಮುಚ್ಚಿಕೊಂಡು ಕುಳಿತೆನೇ ಹೊರತು, ಮನಸ್ಸು ಮಾತ್ರ ಆ ಸ್ವರೂಪದ ಕಡೆಗೆ ಎಳ್ಳಷ್ಟಾದರೂ ಎಳಸಲೊಲ್ಲದು. ನನ್ನ ನಖಶಿಖಗಳಲ್ಲಿ ಸಹ ಈ ಸುಂದರಿಯಮೂರ್ತಿಯೇ ಕಾಣುವದಲ್ಲದೆ ಬೇರೊಂದಿಲ್ಲ. ಹೀಗೇಕೆ ಆಗಿರಬಹುದು? ನಿಜ. ಒಂದುವೇಳೆ ಇವಳ ಅದ್ವಿತೀಯವಾದ ಲಾವಣ್ಯವನ್ನು ನೋಡಿ ಈ ಕಣ್ಣುಗಳು ಸಾಕಷ್ಟು ತೃಪ್ತಿಹೊಂದಿರಲಿಕ್ಕಿಲ್ಲ; ಅಂತೇ ಹೀಗಾಗಿರಬಹುದು. ಹಾಗಾದರೆ ಇವುಗಳನ್ನು ಒಂದು ಸಾರೆ ಸಂತೋಷಗೊಳಿಸಿ ಬಿಡುತ್ತೇನೆ. ನಮ್ಮಂಥ ಜಿತೇಂದ್ರಿಯರಿಗೇನು? ಪ್ರತ್ಯಕ್ಷ ರತಿದೇವಿಯು ಬಂದು ತೊಡೆಯಮೇಲೆ ಕುಳಿತರೂ ಸಹ ನಮಗೆ ವ್ರತಭಂಗದ ಭೀತಿಯಿರುತ್ತಿರುವದಿಲ್ಲ. ಅಂದಮೇಲೆ ಈ ಸುಂದರಿಯ ಕಡೆಗೆ ಒಂದು ಸಾರೆ ಕೇವಲ ದೃಷ್ಟಿಯನ್ನಿಡುವದರಿಂದ ಆಗುವದಾದರೂ ಏನು?(ಅವಳ ಕಡೆಗೆ ನೋಡಿ) ಏನಾಶ್ಚರ್ಯವಿದು! ಇವಳ ಸೌಂದರ್ಯವು ಕ್ಷಣಕ್ಷಣಕ್ಕೆಹೆಚ್ಚುತ್ತಿರುವದಲ್ಲ! ಅಹಹ! ಇಂಥ ಸುಂದರರೂಪವು ದೃಷ್ಟಿಗೆ ಬೀಳುತ್ತಲೇ ಯಾವನ ಮನಸ್ಸು ಅಚಲವಿರುವದೋ ಅವನೇ ನಿಜವಾದ ವಿರಕ್ತನು. ಅಹಹ ಎಂಥ ಸೌಂದರ್ಯವು! ಎಷ್ಟು ಶುಭ್ರಕಾಂತಿಯು! ಇವಳ ತಾರುಣ್ಯದ ತೇಜಸ್ಸಾದರೂ ಎಷ್ಟು!! ವಾ: ಭೂಲೋಕವೇ ಧನ್ಯ ಧನ್ಯ! ಇಂದಿಗೆ ನೀನೇ ಧನ್ಯ! (ಆನಂದದಿಂದ ಅವಳ ಕಡೆಗೆ ನೋಡುತ್ತ ತಲೆ ಅಲ್ಲಾಡಿಸುವನು.)

ಮಹಾಶ್ವೇತಾ:—ನಮಸ್ಕಾರ ಮಾಡಿ ಹಿಂತಿರುಗಬೇಕೆಂದರೆ ಏನೋ ಒಂದು ತರದ ವೃತ್ತಿಯನ್ನು ಸೂಚಿಸುವ ಇವನ ಮುಖಲಕ್ಷಣ

ವನ್ನು ನೋಡಿ, ಪುನಃ ನನ್ನ ಮನಸ್ಸು ಇಲ್ಲಿಯೇ ನಿಲ್ಲಲಿಚ್ಛಿಸುತ್ತದೆ. ಯಾಕಂದರೆ:—

||ಪದ||("ಬಾಶಮಲಾಲಾಜ" ಎಂಬಂತೆ)

ಪಾವನನೀತರುಣಾಭಿರಾಮಂ ಸುಪ್ರೇಮಂ ||ಪ|| ಭಾವಜವಂದಿತಂ ಶಾಂತಸುಸ್ವಭಾವಂ | ನವಯುವತಿಗೆ ಸುಖವನೀವವೀರಂ | ಪ್ರವೀರಂ ಸುಧೀರಂ ||ಅ.ಪ|| ಅಮಮ ಮನವಭ್ರಾಂತಗೊಳಿಪ | ಸುಮನೋಹರ ರೂಪ ಭರಿತಂ | ಕಮಲವದನಂ ಕೋಮಲಾಂಗಂ | ರಾಮಾಭಿರಾಮಂ ||೧||

ಪುಂಡರೀಕ:—(ಒಮ್ಮೆಲೇ)ಶಿವಶಿವ! ಶಾಂತಂ ಪಾಪಂ! ಶಾಂತಂ ಪಾಪಂ! ನಾನು ಯಾರು? ಏನು ಮಾಡುತ್ತಲಿರುವೆನು? ಯಾವ ಕಡೆಗೆ ನಡೆದಿರುವೆನು? ನಿಜವಾಗಿ ತಿಳಿದು ನೋಡಿದರೆ:—

||ಸಾಕಿ||

ಸ್ತ್ರೀದರ್ಶನದಿಂ ಕಾಮುಕರಿಹದೊಳ್ ಲೋಭಿತರಪ್ಪವೊಲಿಂದೆ |
ಇದರಿಂ ನಾನತಿಮೋಹಿತನಾದೆಂ ಯುವತಿಯು ದರ್ಶನದಿಂದೆ ||
ಮದನಶರಗಳಿಂದಂ || ಆದೆನು ನಾನತಿ ಸಲೆಮಂದಂ ||೧||

ಆದ್ದರಿಂದ ಈಗ ನನ್ನ ಮನಸ್ಸಿಗೆ ನಾನೇ ಬುದ್ಧೀಹೇಳುವದುಚಿತವು. ಎಲೆ ಮನವೇ ತಿರುಗು-ತಿರುಗು, ಇದು ನಿನ್ನ ಮಾರ್ಗವಲ್ಲ ಹಿಂತಿರುಗು. (ಕಣ್ಣು ಮುಚ್ಚಿ 'ಶಿವೋಹಂಶಿವೋಹಂಶಿವಃಕೇವಲೋಹಂ' ಹೀಗೆ ತ್ರಿವಾರ ಘೋಷವಾಡಿ) ನಿಜ, ಮನಸ್ಸನ್ನು ಮಾತ್ರ ಹಿಂದಿರುಗಿಸಿದೆನು. ಕಣ್ಣುಗಳಂತೆ ಕಿವಿಗಳೂ ಅಷ್ಟು ತೃಪ್ತಿಹೊಂದಿದ್ದರೆ ತೀರಿಹೋಗುತ್ತಿತ್ತು; ಪುನಃ ಈ ಸುಂದರಿಯ ನೆನವು ಸಹ ತೆಗೆಯುದಂತೆ ಮನಸ್ಸಿಗೆ ಬುದ್ಧೀ ಹೇಳುತ್ತಿದ್ದೆನು. ಆದರೆ ಇವಳ ಕೂಡ ಭಾಷಣಪ್ರಸಂಗವು ಒದಗಿದ ಹೊರತು ಇವುಗಳ ಇಚ್ಛೆಯಾದರೂ ಹೇಗೆ ಪೂರ್ಣವಾಗಬೇಕು? (ಯೋಚಿಸಿ) ಛೀಛೀ ಬೇಡ ಬೇಡ ಈ ತರದ ಕಲ್ಪನೆಯೇ ಬೇಡ. ಇವಳನ್ನು ನೋಡಿದ

ಮಾತ್ರಕ್ಕೆ ನನ್ನ ಮನೋವೃತ್ತಿಯಲ್ಲಿ ಈ ತರದ ಹೆಚ್ಚು ಕಡಿಮೆಯಾಯಿತು. ಇನ್ನು ಮಾತಾಡಿದರೆಪ್ರಾಗಬೇಡ. ಕೇವಲ ಕಾಮುಕರಂತೆ ಕಾಮ ದೇವನ ಕಿಂಕರನಾಗಬಹುದು. ಆದ್ದರಿಂದ ಇದರ ಮಾರ್ಗವೇ ಬೇಡ.

ಮಹಾಶ್ವೇತಾ:—(ತನ್ನಲ್ಲಿ) ಅಪ್ಪಯ್ಯ ಇದೇನೆ? ಒಮ್ಮೆ ಶಾಂತ ವೃತ್ತಿಯು, ಒಮ್ಮೆ ಕೋಪೋದ್ರೇಕಮುದ್ರೆಯು; ಇದೇನೋ ಒಂದು ವಿಲಕ್ಷಣವಾಗಿ ತೋರುತ್ತದೆ. ಆದ್ದರಿಂದ ಈಗ ನಾನು ನಮಸ್ಕರಿಸಿ ಮನೆಗೆ ಹೋಗುವದು ಯೋಗ್ಯವು. (ಹತ್ತರಹೋಗಿ) ಮುನಿಗಳೇ ವಂದಿಸುವೆನು. (ಶರಗು ಸಾವರಿಸುವಳು)

ಪುಂಡರೀಕ:— (ಆನಂದದಿಂದ) ಅಭೀಷ್ಟಮಸ್ತು! ಅಭೀಷ್ಟಮಸ್ತು! (ತನ್ನಲ್ಲಿ) ಅಹಹ! ಆನಂದ ಆನಂದ ಅತ್ಯಾನಂದ! ಇವಳ ಸೆರಗಿನ ಗಾಳಿಯು ನನ್ನ ಅಂಗಕ್ಕೆ ತಗಲಿದ್ದರಿಂದಲೇ ಇಷ್ಟು ಸಂತೋಷವಾಗುತ್ತದೆ; ಅಂದಮೇಲೆ ಪ್ರತ್ಯಕ್ಷ ಇವಳ ಅಂಗಸ್ಪರ್ಶದಿಂದ ಎಷ್ಟು ಆನಂದವಾಗಬಹುದು? ಅಹಹ! ಭಾಷಣವಾದರೂ ಎಷ್ಟು ಮಂಜುಳ! "ಮುನಿಗಳೇ ವಂದಿಸುವೆನು" ಈ ಶಬ್ದವಾದರೂ ಎಷ್ಟು ಮಧುರ! (ಪ್ರಕಾಶವಾಗಿ) ಸುಂದರೀ ಇಷ್ಟು ದೂರವೇಕೆ? ಹತ್ತರ ಬಾ ಮುಕ್ತೀನಾದರೂ ಇದ್ದರೆ ಮಾತನಾಡು. (ಎಂದು ಮೇಲಕ್ಕೇಳುವನು)

ಮಹಾ:— (ಹಿಂದಕ್ಕೆ ಸರಿಯುವಳು)

ಪುಂಡರೀಕ:— ||ಕಂದ||

ತರುಣಿಯೆ ಹಿಂದಕೆ ಸರಿವರೆ |
ಭರದಿಂದಾಡಿರದೆ ಬಂದು ಮೃದುಭಾಷಣವಂ ||
ತೊರೆನೀಂ ಭಯಸಂಶಗಳ |
ಕರುಣವತೋರೆನ್ನ ಮೇಲೆ ಕೋಮಲಗಾತ್ರೆ ||೧||

(ಹೀಗೆನ್ನುತ್ತಲೇ ಅವಳನ್ನು ಹಿಡಿಯಹೋಗುವನು, ಇಷ್ಟರಲ್ಲಿ ಒಳಗಿನಿಂದಲೇ ಅವನ ಮಿತ್ರ)

ಕಪಿಂಜಲ:—(ಗಟ್ಟಿಯಾಗಿ) ಪುಂಡರೀಕಾ ಪುಂಡರೀಕಾ (ಎಂದು ಕೂಗುವನು)

ಪುಂಡರೀಕ:— (ಅದನ್ನು ಕೇಳುತ್ತಲೇ ಬೆದರಿ) ಹಾ! ಘಾತವಾಯಿತು, ಈ ವರೆಗೂ ನನ್ನಿಂದಾದ ಕೃತ್ಯವನ್ನೆಲ್ಲ ಮಿತ್ರ ಕಪಿಂಜಲನು ಕಳ್ಳತನದಿಂದ!ನೋಡಿದಂತೆ ತೋರುತ್ತದೆ; ಆದದ್ದರಿಂದ ಈಗ ನಾನು ಇಲ್ಲಿ ಇರುವದು ಯೋಗ್ಯವಲ್ಲ. ಈ ವೃಕ್ಷದ ಮರೆಗೆ ಅಡಗಿ ನಿಲ್ಲುವೆನು. ಮುಂದೆ ಆದದ್ದಾಗಲಿ. ಸುಂದರೀ ಇಗೋ ನನ್ನ ಮಿತ್ರ ಬಂ........ (ಓಡುವನು)

ಕಪಿಂಜಲ;—ಪುಂಡರೀಕಾ ಪುಂಡರೀಕಾ; ಓ ಅನ್ನುವದಿಲ್ಲವಲ್ಲ! ಎಲ್ಲಿ ಹೋಗಿರಬಹುದು? (ಮಹಾಶ್ವೇತೆಯ ಕಡೆಗೆ ತಿರುಗಿ)ಹೇ ಕಲ್ಯಾಣಿ, ಕಿವಿಯಲ್ಲಿ ಪುಷ್ಪಮಂಜರಿಯನ್ನಿಟ್ಟಿರುವ ಒಬ್ಬ ಸುಂದರ ತರುಣ ಮುನಿಪುತ್ರನನ್ನೇನಾದರೂ ಇಲ್ಲಿ ನೋಡಿದೆಯಾ?

ಮಹಾ;— ಹೌದು ಮಹನ್ ನೋಡಿದೆನು. ಆ ಪುಣ್ಯವಂತನ ದರ್ಶನದಿಂದ ಪವಿತ್ರಳಾದೆನು. ಇದೇ ಈಗ ತುಸುಹೊತ್ತಿನ ಕೆಳಗೆ ಈ ಮಲ್ಲಿಕಾಲತೆಯ ಬಳಿಯಲ್ಲಿ ಹಾಯ್ದು ಹೋದನು; ಇಗೋ ನೋಡಿರಿ ಅವನ ಕಮಂಡಲು ಇಲ್ಲಿಯೇ ಇರುತ್ತದೆ.

ಪುಂಡರೀಕ:—ಹರಹರ! ಸರ್ವಸ್ವವೂ ಕೆಟ್ಟುಹೋಯಿತು; ಅವಸರದೊಳಗೆ ನನ್ನ ಆ ಕಮಂಡಲು ಅಲ್ಲಿಯೇ ಉಳಿಯಿತು.

ಮಹಾಸ್ವೇತಾ:—ಭಗವನ್ ನಾನು ತಮ್ಮನ್ನು ಕುರಿತು ಒಂದು ಸಂಗತಿಯನ್ನು ವಿಚಾರಿಸುವೆನು; ಅದನ್ನಷ್ಟು ಹೇಳಿ ಅನುಗ್ರಹಿಸಬೇಕು

ಕಪಿಂಜಲ:—ತಾಯಿ ನಿರ್ಭಯದಿಂದ ಕೇಳಬಹುದು.

ಮಹಾ:—ಮತ್ತೇನೂ ಇಲ್ಲ. ನೀವು ಯಾರನ್ನು ಹುಡುಕುತ್ತಿರುವಿರೋ ಅವರು ಯಾರು?

ಕಪಿಂಜಲ:—ಕೇಳು ಸ್ವರ್ಗವಾಸಿಯಾದಂಥ, ತ್ರಿಭುವನ ವಿಖ್ಯಾತ

ನಾದಂಥ, ಸಕಲವಂದ್ಯನಾದಂಥ ಶ್ವೇತಕೇತು ಎಂಬ ಹೆಸರಿನ ಒಬ್ಬ ಮಹಾತಪಸ್ವಿಯು ಇರುತ್ತಿರುವನು. ಅವನು ಒಂದು ದಿವಸ ಪೂಜೆಗೋಸ್ಕರ ಕಮಲಪುಷ್ಪಗಳನ್ನು ತರುವದಕ್ಕಾಗಿ ಮಂದಾಕಿನೀ ನದೀತೀರಕ್ಕೆ ಹೋಗಿರಲು, ಅಲ್ಲಿ ಒಂದು ಆಶ್ಚರ್ಯದ ಕೆಲಸವು ನಡೆಯಿತು.

ಮಹಾಶ್ವೇತಾ:—ಮಹನ್ ಅದನ್ನಷ್ಟು ತಿಳಿಸಬೇಕು.

ಕಪಿಂಜಲ:—ಶ್ವೇತವರ್ಣದ ಕಮಲದ ಮೇಲೆ ಲಕ್ಷ್ಮಿಯು ಕುಳಿತಿದ್ದಳು. ಆಗ ಅವಳ ದೃಷ್ಟಿಯು ಆ ಮಹರ್ಷಿಯ ಮೇಲೆ ಬಿದ್ದು, ಮೋಹವುತ್ಪನ್ನವಾಗಿ, ದರ್ಶನಮಾತ್ರದಿಂದಲೇ ಆವಳಿಗೆ ಸಮಾಗಮಸುಖವು ದೊರೆಯಿತು; ಇಷ್ಟರಿಂದಲೇ ಗರ್ಭಧಾರಣವಾಗಿ ಒಂದು ಮಗುವು ಜನಿಸಿತು, ಆಗ ಅವಳು ಆ ಮಗುವನ್ನು ಆ ಮಹರ್ಷಿಯ ವಶಕ್ಕೆ ಕೊಡಲು, ಅವನು ತನ್ನ ಆಶ್ರಮದಲ್ಲಿಯೇ ಜೋಪಾನಮಾಡಿದನು. ಬಿಳೀ ಕಮಲದಮೇಲೆ ಕುಳಿತಾಗ ಗರ್ಭಧಾರಣವಾಗಿ ಜನಿಸಿದ್ದರಿಂದ ಆ ಮಗುವಿಗೆ ಪುಂಡರೀಕನೆಂದು ಹೆಸರಿಟ್ಟರು. ಅವನೇ ನನ್ನ ಮಿತ್ರನಾದ ಈ ಪುಂಡರೀಕನು. ಇವನು ಸಕಲವಿದ್ಯಾಪಾರಂಗತನೂ, ಸಕಲ ಕಲಾಕೋವಿದನೂ ಇರುವನು. ಇವನ ಸಂಕ್ಷಿಪ್ತ ಚರಿತ್ರವಿಷ್ಟೇ ಸರಿ.

ಪುಂಡ:—(ತನ್ನಲ್ಲಿ) ನನ್ನ ಮಿತ್ರನಿಗೆ ನನ್ನ ವಿಷಯವಾಗಿ ವಿನೂ ಸಂಶಯಬಂದಿಲ್ಲವೆಂಬಂತೆ ಕಾಣುತ್ತದೆ. ಇಲ್ಲದಿದ್ದರೆ ಅವನು ಇವಳ ಸಂಗಡ ಇಷ್ಟೊಂದು ಶಾಂತವೃತ್ತಿಯಿಂದ ಮಾತಾಡುತ್ತಿದ್ದಿಲ್ಲ. ಅಂದಮೇಲೆ ನಾನು ಈಗ ಅಲ್ಲಿ ಹೋಗಲಿಕ್ಕೆ ಯಾವತರದ ಬಾಧೆಯೂ ಇಲ್ಲ.

ಮಹಾ:—ಮುನಿಗಳೇ ಇನ್ನೊಂದು ಸಂಗತಿಯನ್ನು ಕೇಳುತ್ತೇನೆ ತಾವು ಸಿಟ್ಟಾಗಬಾರದು.

ಕಪಿಂ:—ಇಲ್ಲ ಇಲ್ಲ, ನಿರ್ಭಯದಿಂದ ಕೇಳಬಹುದೆಂದು ಈ ಮೊದಲೇ ಹೇಳಿರುವೆನಲ್ಲವೆ?

ಮಹಾ:—ಭಗವನ್ ಅವನ ಕರ್ಣಾಭರಣವಾಗಿದ್ದ ಮಧುರ

ವಾಸನೆಯ ಪುಷ್ಪಮಂಜರಿಯು ಯಾವ ವೃಕ್ಷದ್ದೆಂಬದು ಗೊತ್ತಾಗದ ಮೂಲಕ ತಿಳಿಯಲಿಚ್ಛಿಸುವೆನು.

ಪುಂಡ:— (ನಕ್ಕು ತನ್ನಲ್ಲಿ) ನನಗೆ ಆವರಿಸಿರುವ ಮನ್ಮಥನೆಂಬ ಭೂತವು ಇವಳಿಗೂ ಆವರಿಸಿರುವಂತೆ ತೋರುತ್ತದೆ!

ಕಪಿಂ:—ಹೇ ಭಗಿನಿ, ನೀನು ಆ ಸಂಗತಿಯನ್ನು ತಿಳಿಯಲು ಬಹಳ ಇಚ್ಛಿಸಿದಂತೆ ತೋರುತ್ತದೆ ಕೇಳು:—

|| ಸಾಕಿ. ||

ಸುರತರುವಿನ ಸುಮಮಂಜರಿಯದು ಕೇಳ್ ನಂದನ ದೇವಿಯು
ಮುಟ್ಟಲ್ || ಪರಮಾದರದಿಂ ಕರ್ಣದೊಳಿರಿಸಲ್ಕವಗತಿ ಭರದಿಂ
ಕೊಟ್ಟಳ್ || ಸರಸವ ಬೆಳೆಸುತ್ತೆ | ಇರುವದು ಕರ್ಣದೊಳ್
ಮೆರೆಯುತ್ತೆ | ||

ಮಹಾ:—ಅಹಹ! ಅಂತೇ ಅದಕ್ಕೆ ಇಷ್ಟು ಸುವಾಸನೆಯಿರುವಂತೆ ತೋರುತ್ತದೆ.

ಪುಂಡ:—(ತನ್ನಲ್ಲಿ) ನಾನು ಹೋಗಲಿಕ್ಕೆ ಇದು ಒಳ್ಳೇ ಯೋಗ್ಯವಾದ ವೇಳೆಯು! (ಮುಂದೆ ಬಂದು) ಹೇ ಸುಂದರೀ, ಈ ಪುಷ್ಪಮಂಜರಿಯ ಮೇಲೆ ನಿನಗೆ ಬಹಳ ಇಚ್ಛೆಯಿರುವಂತೆ ತೋರುತ್ತದೆ! ಇಗೋ ತೆಗೆದುಕೋ ನಿನ್ನ ಕರ್ಣದಲ್ಲಿರಿಸುವೆನು!! (ಕಿವಿಯಲ್ಲಿಡುತ್ತಿರುವಾಗ ಅವನ ಕೈಯೊಳಗಿನ ಸ್ಫಟಿಕಮಾಲೆಯು ಕೆಳಗೆ ಬೀಳುವದು; ಅದನ್ನು ಮಹಾಶ್ವೇತೆಯು ಆವನಿಗೆ ತಿಳಿಯದಂತೆ ತೆಗೆದುಕೊಳ್ಳುವಳು.)

ಕಪಿಂ:—(ತನ್ನೊಳಗೆ) ಹಾ! ಆಶ್ಚರ್ಯ! ಆಶ್ಚರ್ಯ! ಕಾಮಾತುರನಂತೆ ಇವನ ಮನಸ್ಸು ಚಂಚಲವಾಗಿರುವದು. ತನ್ನ ಕಯ್ಯೊಳಗಿನ ಸ್ಫಟಿಕಮಾಲೆಯು ಕೆಳಗೆ ಬಿದ್ದರೂ ಇವನಿಗೆ ಎಚ್ಚರವೇ ಇಲ್ಲ; ಹಾಗೂ ಅವಳು ಅದನ್ನು ತೆಗೆದುಕೊಂಡ ಸಂಗತಿಯೂ ಗೊತ್ತಾಗಲಿಲ್ಲ. ಇವರಲ್ಲಿ ಪರಸ್ಪರ ಅನುರಕ್ತಭಾವವು ಉತ್ಪನ್ನವಾಗಿರುವದು, ಇದರೊ

ಳಗೆ ಸಂಶಯವೇ ಇಲ್ಲ.

ತರಲಿಕೆ:—(ಒಳಗಿನಿಂದಲೇ) ಸಖೀ ಮಹಾಶ್ವೇತೇ ಮಹಾಶ್ವೇತೇ, (ಎಂದು ಗಟ್ಟಿಯಾಗಿ ಕೂಗುವಳು.)

ಮಹಾ:—(ಬೆದರಿ)ಅಪ್ಪಯ್ಯ! ತರಲಿಕೆ ಬರುವಂತೆ ತೋರುತ್ತದೆ.

ತರಲಿಕೆ:—(ಹೊರಗೆ ಬಂದು) ಸಖೀ ಮಹಾಶ್ವೇತೆ, ವನದಲ್ಲಿ ಹುಡುಕಿ ಹುಡುಕಿ ಬೇಸತ್ತು, ಕಟ್ಟಕಡೆಗೆ ಅಚ್ಛೋದಸರೋವರದ ಹತ್ತಿರ ಹೋಗಿ ನೋಡಲು ಅಲ್ಲಿಯೂ ನೀನು ಇದ್ದಿಲ್ಲ. "ಒಬ್ಬಳನ್ನೇ ಯಾಕೆ ಬಿಟ್ಟು ಬಂದೆ?" ಎಂದು ತಾಯಿಯವರು ಸಿಟ್ಟು ಮಾಡಿದರು. ಈಗಾದರೂ ಬೇಗ ನಡೆ, ಅವರು ನಿನ್ನ ಸಲುವಾಗಿ ಚಿಂತಿಸುತ್ತ ಕುಳಿತಿರುವರು.

ಮಹಾ:—ನಿಜವೇನು? ಹಾಗಾದರೆ ನಡೆ ಹೋಗುವಾ. (ತನ್ನಲ್ಲಿ)

||ಪದ||ರಾಗ—ಶಂಕರಾಭರಣ, ತಾಳ—ಆದಿ.

ಧರಿಸುವೆನಿದನಾಂ ಕೊರಳೊಳ್ ಸಂತೋಷದಿಂ ||ಪ|| ಪರತರವೆನಿ
ಸಿಹಸ್ಫಟಿಕಾಕ್ಷ ಮಾಲೆಯ ಧರಿಪೆಂ ಸಂತೋಷದಿಂ ||ಅ. ಪ.||
ಕಾಮಸಮಸುಕೋಮಲಾಂಗನೆನ್ನೊಳಿಂದು ಮನವನಿರಿಸಿ ||
ಪ್ರೇಮವ ತೋರಲ್ಕಿತ್ತಿಹ ||೧|| ಮಾಲೆಯ—

ಪ್ರೇಮದ ಗುರುತೆಂದು ಈ ಸ್ಫಟಿಕಮಾಲೆಯನ್ನು ತನ್ನ ಮಿತ್ರನಿಗೆ ತಿಳಿಯದಂತೆ ಈ ಮುನಿಕುಮಾರನು ನನ್ನ ಕೈಯಲ್ಲಿ ಚಲ್ಲಿದನು. ಆದದ್ದರಿಂದ ತಡಮಾಡದೆ ಇದನ್ನು ಕೊರಳಲ್ಲಿ ಹಾಕಿಕೊಳ್ಳುವೆನು. (ಹಾಕಿಕೊಂಡು) ಸಖೀ ತರಲಿಕೆ ಬೇಗನಡೆ ಹೋಗುವಾ. (ಹೋಗುವರು.)

ಪುಂಡರೀಕ:—(ತನ್ನಲ್ಲಿ) ಅಹಹ! ಇವಳು ನನ್ನ ಪಂಚಪ್ರಾಣವನ್ನು ತೆಗೆದುಕೊಂಡು ಹೊರಟಳು! ಈಗ ಏನು ಮಾಡಲಿ? [ಪ್ರಕಾಶವಾಗಿ] ಹೇ ಶುಭಾಂಗಿ, [ಎಂದು ಅವಳ ಹಿಂದೆ ಹೊರಡಹತ್ತುವನು.]

ಕಪಿಂಜಲ:—ಹಾ ಪುಂಡರೀಕಾ (ಅಡ್ಡ ಬಂದು ಸಿಟ್ಟಿನಿಂದ)

ಎಲ್ಲಿದೆ ನಿನ್ನ ವೈರಾಗ್ಯಶೀಲತೆಯು! ವಿಷಯದ್ವೇಷ್ಟಿಯೂ, ಮನೋನಿಗ್ರಹಿಯೂ, ಮಹಾಜ್ಞಾನಿಯೂ ಆಗಿದ್ದ ನೀನು ಇಂಥಾ ನಿಂದಾಸ್ಪದವಾದ ಕೆಲಸಕ್ಕೆ ಪ್ರಾರಂಭಿಸಿದೆಯಾ? ವಾಃ ನೆಟ್ಟಗದೆ.

ಪುಂಡರೀಕ:—(ತನ್ನಲ್ಲಿ) ಛೀ, ಛೀ, ನನ್ನ ತಿಳುವಳಿಕೆ ತಪ್ಪಾಯಿತು. ನಿಜವಾಗಿ ನನ್ನ ಸಂಗತಿಯು ಇವನಿಗೆ ಗೊತ್ತಿಲ್ಲವೆಂದು ತಿಳಿದಿದ್ದೆನು; ನನ್ನಿಂದ ಅಪರಾಧವಾದರೂ ಘಟಿಸಿತು; ಈಗ ಇವನಿಗೆ ಏನು ಹೇಳಲಿ? (ವಿಚಾರಿಸಿ) ಒಳ್ಳೇದು, (ಪ್ರಕಾಶವಾಗಿ) ಮಿತ್ರಾ ಕಪಿಂಜಲಾ, ನನ್ನ ಸಲುವಾಗಿ ಇಲ್ಲದ್ದೊಂದು ವಿಕಲ್ಪವನ್ನುಂಟು ಮಾಡಿಕೊಂಡು ವ್ಯರ್ಥವಾಗಿ ದೂಷಿಸಬೇಡ. ಈಗ ನನ್ನಿಂದಾದ ಪ್ರಮಾದವಾದರೂ ಏನು?

ಕಪಿಂಜಲ:—(ಸಿಟ್ಟಿನಿಂದ) ಏನೂ ಆಗಿಲ್ಲವೋ? ಎಲೈ ಕಾಮಾಂಧಾ, ಆ ನೀಚಸ್ತ್ರೀಯು ನಿನ್ನ ಸ್ಫಟಿಕಮಾಲೆಯನ್ನು ಒಯ್ದರೂ ಅದರ ಪರಿವೆಯೇ ನಿನಗಿಲ್ಲ; ಇದಕ್ಕೇನೆನ್ನಬೇಕು? ಈಗ ನಿನ್ನ ಹೃದಯವನ್ನು ಸಹ ಎಳೆದೊಯ್ಯಲುದ್ಯುಕ್ತಳಾಗಿರುವಳು. ಅದನ್ನಾದರೂ ಪ್ರತಿಬಂಧಿಸು.

ಪುಂಡರೀಕ:—ಆ ನನ್ನ ಸ್ಫಟಿಕಮಾಲೆಯನ್ನೇ? ಅವಳು ಒಯ್ದಳೇ? (ಇಲ್ಲದ್ದನ್ನು ನೋಡಿ ಸಿಟ್ಟಾದಂತೆ ತೋರಿಸಿ) ನೋಡುತ್ತೇನೆ, ಹ್ಯಾಗೆ ಒಯ್ಯುತ್ತಾಳೆ (ಅವಳು ಹೋದದಿಕ್ಕಿನ ಕಡೆಗೆ ಮುಖವನ್ನು ತಿರುಗಿಸಿ ತನ್ನಲ್ಲಿ) ಸುಂದರೀ, ಈ ವರೆಗೆ ನಿನ್ನ ಮುಖಚುಂಬನಕ್ಕೋಸ್ಕರ ನನ್ನ ಅಧರವು ಸ್ಫುರಣಗೆಯ್ಯುತ್ತಿತ್ತು. ಆದರೆ ಅದೇ ಅಧರವು ಈಗ ಸಿಟ್ಟಿನ ಲಕ್ಷಣವನ್ನು ತೋರಿಸುತ್ತದೆ. ಒಳ್ಳೇದು! ನೀನು ಚತುರೆಯಾದರೆ ನಿಜವಾದ ಮರ್ಮವನ್ನು ತಿಳಿದುಕೊಳ್ಳಬಹುದು! ಈಗ ಏನು ಮಾಡಲಿ? (ವಿಚಾರಿಸಿ)ಸ್ಫಟಿಕಮಾಲೆಯನ್ನು ತರುವ ನೆವದಿಂದ ಅವಳ ಬಳಿಗೆ ಹೋಗುವೆನು, ಅಂದರೆ ಇನ್ನೊಂದು ಸಾರೆ ಅವಳ ದರ್ಶನವಾದರೂ ಆಗಬಹುದು! (ಎಂದು ಹೊರಡುವನು.)

ಕಪಿಂಜಲ:—ಹಾ! ಮತ್ತೆಲ್ಲಿ ಹೋಗುವಿ?

ಪುಂಡರೀಕ:—ಸ್ಫಟಿಕಮಾಲೆಯನ್ನು ತೆಗೆದುಕೊಂಡು ಬರುವೆನು.

ಕಪಿಂಜಲ:—ಅಲ್ಲಿಗೆ ಹೋಗುವದು ಬೇಕಾಗಿಲ್ಲ, ಇಲ್ಲಿಂದಲೇ ಕೂಗು.

ಪುಂಡರೀಕ:—(ತನ್ನಲ್ಲಿ) ನಿರುಪಾಯವು!(ಎಂದು ಪ್ರಕಾಶವಾಗಿ) ಎಲೇ ಉನ್ಮತ್ತೇ ನನ್ನ ಸ್ಫಟಿಕಮಾಲೆಯನ್ನು ಕದ್ದೊಯ್ದಿರುವೆಯಾ! ತಾಳು ತಾಳು, ಅದನ್ನು ತಂದುಕೊಡದೆ ಒಂದು ಹೆಜ್ಜೆಯನ್ನಾದರೂ ಹೇಗೆ ಮುಂದಕ್ಕೆ ಇಡುವೆಯೋ ಇಡು. ಆ ಮೇಲೆ ನಿನ್ನ ಪರಿಣಾಮ ನೋಡಿಕೋ, ಶಾಪದಿಂದ ದಗ್ಧಮಾಡಿಬಿಡುತ್ತೇನೆ ಜೋಕೆ.

ತರಲಿಕಾ:—(ಗಾಬರಿಯಾಗಿ) ಸಖೀ ಮಹಾಶ್ವೇತೆ, ಅವರು ನಿನ್ನನ್ನು ಉದ್ದೇಶಿಸಿಯೇ ಮಾತಾಡುವಂತೆ ತಿಳಿಯುತ್ತದೆ. ಆ ಮಾಲೆಯು ಎಲ್ಲಿದೆ? ಹೋಗು ಅದನ್ನು ಅವರಿಗೆ ಕೊಟ್ಟು ಕ್ಷಮೆಬೇಡಿಕೊಂಡು ಬಾ; ಇಲ್ಲದಿದ್ದರೆ ಕಠಿಣ ಪ್ರಸಂಗವಾಗಬಹುದು.

ಮಹಾಶ್ವೇತಾ:—(ತನ್ನಲ್ಲಿ) ಅವನ ಪೂರ್ವದ ಕೃತಿಯಮೇಲಿಂದ ಈ ಸಿಟ್ಟು ನಿಜವಾದದ್ದೆಂದು ತಿಳಿಯಲಾರೆನು. ತನ್ನ ಮಿತ್ರನ ಮನಸ್ಸಿನ ಸಂಶಯವನ್ನು ದೂರಮಾಡಲಿಕ್ಕೆಂದು ಹೀಗೆ ಮಾತಾಡುತ್ತಿರುವಂತೆ ತೋರುತ್ತದೆ ಏನೇ ಇರಲಿ, ಅವನ ಸ್ಫಟಿಕಮಾಲೆಯ ಒದಲಾಗಿ ನನ್ನ ಈ ಮುತ್ತಿನ ಹಾರವನ್ನು ಕೊಟ್ಟು ನೋಡುವೆನು. (ಪ್ರಕಾಶವಾಗಿ) ಇಗೋ ತಕ್ಕೊಳ್ಳಿರಿ ನಿಮ್ಮ ಮಾಲೆಯನ್ನು; ದಯಮಾಡಿ ಕ್ಷಮಿಸಿರಿ ನನ್ನ ಅಪರಾಧವನ್ನು. (ಕೊಟ್ಟು ಹೋಗುವಳು.)

ಪುಂಡರೀಕ:—(ತನ್ನಲ್ಲಿ) ಪ್ರಿಯೆ, ನಾನೇ ನಿನ್ನನ್ನು ಕ್ಷಮೆಬೇಡ ಬೇಕಾಗಿತ್ತು; ಆದರೆ ಏನು ಮಾಡಲಿ! (ಮಿತ್ರನ ಕಡೆಗೆ ತಿರುಗಿ ಪ್ರಕಾಶವಾಗಿ) ಮಿತ್ರಾ ಕಪಿಂಜಲಾ, ಸ್ತ್ರೀಯು ಪ್ರತ್ಯಕ್ಷ ರಾಕ್ಷಸಿಯೆಂಬ ಮಾತು ಸುಳ್ಳಲ್ಲ! ನೋಡಿದೆಯಾ? ನನ್ನ ಕೈಯೊಳಗಿನ ಸ್ಫಟಿಕಮಾಲೆಯನ್ನು

ಕದ್ದೊಯ್ದವಳೂ ತಾನೇ, ಈಗ ಪುನಃ ಕ್ಷಮೆಬೇಡುವವಳೂ ತಾನೇ, ವಾಃ ವಾಯಾವಿ, ಆಗಲಿ ಆದದ್ದಾಯಿತು. ಮಿತ್ರಾ ಇಗೋ ಸ್ಫಟಿಕಮಾಲೆಯು.

ಕಪಿಂಜಲ:—(ತನ್ನಲ್ಲಿ) ಹಾ! ಇವನು ಕೇವಲ ಕಾಮಾಂಧನಾಗಿರುವನು. (ನೋಡಿ ಸಿಟ್ಟಿನಿಂದ) ಏನು? ಇದು ಸ್ಫಟಿಕಮಾಲೆಯೇನು? ಛೀ ನೀಚಾ:—

||ಪದ|| ರಾಗ—ಶಂಕರಾಭರಣ. ತಾಳ—ಆದಿ.

ಎಚ್ಚರಿಲ್ಲವೇನು ಬುದ್ಧಿಯು ಭ್ರಂಶವಾದುದೇನು ||ಪ||
ಹುಚ್ಚನಾದೆನೀಂ ಸುಮಶರಕಿಂಕರನಾದೆ ಭರದೊಳೇನು ||೧||
ಅಂಧನಲ್ಲ ನಾನು ಮೂಢನೆ ದೃಷ್ಟಿಯುಬೆಲ್ಲಿಹುದು ||
ಸುಂದರ ಸ್ಫಟಿಕದ ಮಾಲೆಯಿದಲ್ಲವು ಮುತ್ತಿನಸರವಿಹುದು ||೨||
ಅಂಧನಾದೆ ನೀಚಾ ವಿಷಯದೆ ಮಾಡುವದಿನ್ನೇನು ||
ಮಂದಮತಿಯುನೀಂ ಸಲ್ಲದು ವಿರತಿಯತೊರೆದು ಪೋಗು ನೀನು||೩||

ಪುಂಡರೀಕ:—(ನೋಡಿ ಲಜ್ಜೆಯಿಂದ ತಲೆಬಾಗಿಸಿ ತನ್ನಲ್ಲಿ) ಅಹಹ! ನಿಜ. ಇದು ಸ್ಫಟಿಕಮಾಲೆಯಲ್ಲ; ಮುತ್ತಿನ ಸರವು. ಆಗಲಿ, ನನ್ನ ಮನಸ್ಸನ್ನಂತೂ ಹರಣಮಾಡಿಕೊಂಡು ಹೋದಳು! ಹೋದರೂ ಹೋಗಲಿ, ಈ ತರದಿಂದ ಮೋಸಮಾಡಿ ಸ್ಫಟಿಕಮಾಲೆಯನ್ನು ಮಾತ್ರ ಒಯ್ಯತಕ್ಕದ್ದಿದ್ದಿಲ್ಲ! [ಪ್ರಕಾಶವಾಗಿ] ಮಿತ್ರಾ, ಕಪಿಂಜಲಾ, ನಿಜವಾಗಿ ಹೇಳುತ್ತೇನೆ. ನಾ-ನಾನು ಅವ-ಅವಳ-

ಕಪಿಂಜಲ:—ಛೀ ದುಷ್ಟಾ, ಮಾತಾಡಬೇಡ, ಸರಿ ಹಿಂದಕ್ಕೆ. (ಸಿಟ್ಟಿನಿಂದ ಹೊರಟುಹೋಗುವನು.)

ಪುಂಡರೀಕ:—(ತುಸು ಹೊತ್ತು ಮೇಲೆ ನೋಡಿ) ಮಿತ್ರ ಕಪಿಂಜಲನು ಸಿಟ್ಟಾಗಿ ಹೋದನು. ಅವನನ್ನು ತಡೆಯಬೇಕೆಂದರೆ ಭೀತಿಯ ಮೂಲಕ ಧೈರ್ಯವು ಸ್ವಲ್ಪಾದರೂ ಉಳಿಯಲಿಲ್ಲ. ಅವನು ಕೋಪಗೊಳ್ಳುವಷ್ಟು ಅಪರಾಧವು ನನ್ನಿಂದ ಘಟಿಸಿರುವದೇನೋ ನಿಜ, ಆದರೆ ಏನು

ಮಾಡಲಿ! ನನ್ನ ಮನಸ್ಸು ವಿಷಯಾಸಕ್ತವಾಗಿತ್ತು. ಆಶಾಭರಿತವಾದ ನನ್ನ ದೃಷ್ಟಿಯು ಅವಳ ಲಾವಣ್ಯರಸಪ್ರಾಶನ ಮಾಡುವದರಲ್ಲಿ ತೊಡಗಿತ್ತು. ಇಂಥ ಪ್ರಸಂಗದಲ್ಲಿ ಅವಳು ನನ್ನ ಕೈಯಲ್ಲಿ ಏನು ಹಾಕಿದಳೆಂಬದು ಸಹ ಗೊತ್ತಾಗಲಿಲ್ಲ. ಇದರಲ್ಲಿ ನನ್ನ ದೋಷವೋ, ಅಥವಾ ಅವಳ ರೂಪಾತಿಶಯದ ದೋಷವೋ? ಅವಳೇ ಕುರೂಪಿಯಾಗಿದ್ದರೆ ನನ್ನಿಂದ ಮಿತ್ರನು ಕೋಪಗೊಳ್ಳುವಷ್ಟು ಅಪರಾಧವಾದರೂ ಎಲ್ಲಿ ಘಟಿಸುತ್ತಿತ್ತು! ಇರಲಿ, ಅವಳು ನನ್ನ ಸ್ಫಟಿಕಮಾಲೆಯನ್ನು ತೆಗೆದುಕೊಂಡು ತನ್ನ ಮುಕ್ತಾಹಾರವನ್ನೇಕೆ ಕೊಟ್ಟಿರಬಹುದು! ಇದರ ಮೇಲಿಂದ ನಾನು ಅವಳಿಗೆ ಮೋಹಿಸಿದಂತೆ ಅವಳಾದರೂ ನನಗೆ ಮೋಹಿಸಿರುವಳೆಂದು ತರ್ಕಿಸಬಹುದೇನು? (ಯೋಚಿಸಿ) ಛೇ ಛೇ,

||ಕಂದ|| ವನವಾಸಿಯೆನಾನುರೆ ರಸಿ- |
ಕನುಮಲ್ಲತ್ತು ಫಲಾಶಿಯೆನಿಸುತಿರುತಿರ್ದುದಂ ಮೇಣ್ ||
ಮನಸಿಜಸತಿನಿಭೆಕಾಮಿಪ- |
ಳೆನಲರಿದೆನಿಸದಲೆ ಮಹಿಯೊಳಿಪ್ಪುದೆನಿಜದಿಂ ||೧||

ಒಳ್ಳೇದು ಹೀಗಿದ್ದರೆ—

||ಪದ|| ("ಪೂರಿಸು ಮನದಭಿಲಾಷೆಯನು" ಎಂಬಂತೆ)
ತ್ತೋರುತ ಮನದಭಿಲಾಷೆಯನು ||ಪ||
ಸಾರಸಾಕ್ಷಿ ಬಹುಪ್ರೇಮದೆತಾಂ | ಅ. ಪ||
ಕರುಣದೊಳೆನ್ನಯ ಚರಿತವನೆಲ್ಲ- |
ವಂತು ಪೋದಳಾಸುಂದರಿಯು ||
ಕರವುನೋಂಕೆಮೃದುಗಲ್ಲಕೆಭರದೆ |
ದರಹಾಸವನಿಡುತಲೆ ತಾನು ||೧||

ಇದಲ್ಲದೆ ತಾನು ಹೋಗುವಾಗ ನನ್ನನ್ನು ತಿರುತಿರುಗಿ ನೋಡಿದಳು. ಇವೆಲ್ಲ ಕೃತಿಗಳ ಮೇಲಿಂದ ಅವಳ ಮನಸ್ಸು ನನ್ನ ಮೇಲೆ ಸಂಪೂರ್ಣ

ಹಾಗಿತ್ತೆಂದು ಹೇಳಲಿಕ್ಕೆ ಏನೂ ಸಂಶಯವಿಲ್ಲ. ಆದರೆ ಉಪಯೋಗ ವೇನು? ಅವಳು ಯಾವಳು, ಎಲ್ಲಿಯವಳು, ಅವಳ ಹೆಸರೇನು, ಇವುಗಳಲ್ಲಿ ಒಂದರ ವಿಷಯವಾಗಿಯೂ ನನಗೆ ಗೊತ್ತಿರಲಿಲ್ಲ. ಈ ಸ್ಥಿತಿಯಲ್ಲಿ ಅವಳನ್ನು ಗೊತ್ತುಹಚ್ಚುವದಾದರೂ ಹೇಗೆ? (ವಿಚಾರಿಸಿ) ಅವಳ ಸಖಿಯ ಮಾತಿನ ಮೇಲಿಂದ ವಿಚಾರ ಮಾಡಿದರೆ, ಆ ಸುಂದರಿಯು ತನ್ನ ತಾಯಿಯೊಡನೆ ಅಚ್ಛೋದಸರೋವರಕ್ಕೆ ಸ್ನಾನಕ್ಕೋಸ್ಕರ ಬಂದಿರಬಹುದೆಂದು ತಿಳಿಯುತ್ತದೆ. (ನೆಲವನ್ನು ನೋಡಿ) ಅಹಹ! ಈ ಪುಷ್ಪ ಧೂಳಿಯ ಮೇಲೆ ಆ ಕೋಮಲೆಯ ಹೆಜ್ಜೆಗಳು ಮೂಡಿರುವವು. ನಿಜ, ಅವಳು ಇದೇ ಸಾಲುಮರಗಳ ಮಾರ್ಗವಾಗಿಯೇ ಹೋಗಿರುವಳು. ನಾನಾದರೂ ಇದೇ ಮಾರ್ಗವಾಗಿ:—

||ಪದ|| "ಕಿತಿವಾನು ಬಲಯುವತೀಜೆ" ಎಂಬಂತೆ

ಸರಸೋಕ್ತಿಯಿಂದಲಿ ತೋಷಿಪ ತರುಣಿಯು ದೊರಕಿಸ ಪೋಗುವೆ
ನಾಂ || ಪಲ್ಲ ||

ಪರಶರವೆನಿಸಿಹ ಸರದೊಳ್ ಸ್ನಾನವ ಗೆಯ್ಯುವ ಸುಂದರಿಯಂ ||
ಅರಿಸಲ್ಕೆ | ಚರಿಸುತ್ತಂ | ಭರದಿಂದಾಂ | ತೆರಳುವೆನು |
ವರಿಸಲು ರಮಣಿಯ ತ್ವರೆಗೊಳಿಪುದು ಮನಂ ||೧||

[ಹೋಗುವನು.]

---

## ಎರಡನೆಯ ಪ್ರವೇಶ.

—:(-0-):—

(ಸ್ಥಳ:—ಅಚ್ಛೋದ ಸರೋವರತೀರ, ತರಲಿಕೆಯು ಕಮಲ ಪುಷ್ಪಗಳನ್ನು ಎತ್ತುತ್ತ ನಿಂತಿರುವಳು; ಆ ವೇಳೆಯಲ್ಲಿ ಪುಂಡರೀಕನು ಪ್ರವೇಶಿಸುವನು.)

ಪುಂಡರೀಕ:—ಹಾ! ನನ್ನ ಮನೋಭೀಷ್ಟವು ಕೈಗೂಡುವಂತೆ

ತೋರುತ್ತದೆ. ಇವಳು ನನ್ನ ಮನೋಹಾರಿಣಿಯ ಸಖಿಯಂತೂ ಹೌದು. ಇವಳನ್ನು ವಿಚಾರಿಸುವೆನು. ಅಂದರೆ ಅವಳು ಎಲ್ಲಿರುವಳೆಂಬದು ತಾನೇ ಗೊತ್ತಾಗುವದು. (ಪ್ರಕಾಶವಾಗಿ) ಹೇ ಭಗಿನೀ,

ತರಲಿಕಾ:—ಯಾರವರು? (ಎಂದು ತಿರುಗಿ ನೋಡುವಳು.)

ಪುಂಡರೀಕ:—ತಾಯಿ, ಯಾಕೆ ನನ್ನಗುರುತು ಸಿಗಲೊಲ್ಲದೇನು?

ತರಲಿಕಾ:—ಮಹಾತ್ಮರೆ ಗುರುತು ಹತ್ತದೇನು ಮಾಡೀತು? ಯಾಕೆ ಇತ್ತ ದಯಮಾಡಿಸಿದಿರಿ?

ಪುಂಡರೀಕ:—ನಿನ್ನ ಕಡೆಗೇ ಬಂದಿರುವೆನು.

ತರಲಿಕಾ:—ಪೂಜ್ಯರೇ ಕೆಲಸವೇನು?

ಪುಂಡರೀಕ:—ತಾಯಿ ನಿನ್ನಿಂದ ಒಂದು ಸಂಗತಿಯನ್ನು ತಿಳಿದು ಕೊಳ್ಳಬೇಕಾಗಿರುವದು.

ತರಲಿಕಾ:—ಅದೇನು?

ಪುಂಡರೀಕ:—ಕೇಳಿದ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡುವೆನೆಂದರೆ ಹೇಳುವೆನು.

ತರಲಿಕಾ:—ಪೂಜ್ಯರೇ ಸಂಶಯ ತಕ್ಕೊಳ್ಳದೆ ಕೇಳಬೇಕು.

ಪುಂಡರೀಕ:—ಒಳ್ಳೇದು, ಹಾಗಾದರೆ ನಿನ್ನ ಆ ಸಖಿಯು ಎಲ್ಲಿರುವಳು?

ತರಲಿಕಾ:—ತನ್ನ ವಾಸಸ್ಥಾನವಾಗಿರುವ ಹೇಮಕೂಟಗಿರಿಗೆ ಹೋದಳು.

ಪುಂಡರೀಕ:—(ಉಸುರುಗರೆದು ವಿಚಾರಿಸಿ) ಒಳ್ಳೇದು ಅವಳು ಯಾರ ಮಗಳು?

ತರಲಿಕಾ:—ಅವಳು ಹಂಸರಾಜನ ಮಗಳು. ಅವಳ ತಾಯಿಯ ಹೆಸರು ಗೌರಿಯು.

ಪುಂಡರೀಕ:—ನಿನಗೂ ಅವಳಿಗೂ ಅತ್ಯಂತ ಸ್ನೇಹವಿರುವದಷ್ಟೇ?

ತರಲಿಕಾ:—ಓಹೋ ನಾನು ಕೇವಲ ಅವಳ ನಂಬಿಗೆಯವಳು.

ಪುಂಡರೀಕ:—ತಾಯಿ ಹಾಗಾದರೆ ನನ್ನದೊಂದು ಕೆಲಸ ಮಾಡುವೆಯಾ?

ತರಲಿಕಾ:—ಭಗವನ್ ತಾವು ಸಕಲ ಜಗತ್‌ಪೂಜ್ಯರು, ತಮ್ಮ ಕಾರ್ಯವನ್ನು ಆಜ್ಞಾಪಿಸಿ ಅನುಗ್ರಹಿಸಬೇಕು.

ಪುಂಡರೀಕ:—(ತನ್ನಲ್ಲಿ) ನನ್ನ ಮನೋಹಾರಿಣಿಗೆ ಪತ್ರ ಬರೆಯ ಬೇಕೆಂದು ಮನಸ್ಸೇನೋ ಹಾತೊರೆಯುತ್ತಿರುವದು. ಆದರ ಲೇಖನ ಸಾಮಗ್ರಿಯಿಲ್ಲವಲ್ಲ! ಏನು ಮಾಡಲಿ; (ಯೋಚಿಸಿ) ಆಗಲಿ, ನಟ್ಟಡವಿ ಯಲ್ಲಿ ಇಲ್ಲದ್ದನ್ನು ಬಯಸಿದರೆ ಎಲ್ಲಿಂದ ಬರಬೇಕು? ತಮಾಲಪತ್ರ ರಸ ವನ್ನು ಹಿಂಡಿ, ನನ್ನ ವಲ್ಕಲದೊಳಗಿನ ಒಂದು ಪಟ್ಟಿಯನ್ನು ಹರಿದು, ಅದರ ಮೇಲೆ ಉಗುರಿನಿಂದ ಬರೆದು ಕಳಿಸುವೆನು. (ಬರೆದು ಪ್ರಕಾಶ ವಾಗಿ) ಇಗೋ ತೆಗೆದುಕೋ ಈ ಪತ್ರವನ್ನು; ನಿಮ್ಮ ಆ ಸಖಿಯು ಒಬ್ಬಳೇ ಕುಳಿತ ವೇಳೆಯಲ್ಲಿ ಅವಳ ಕೈಯಲ್ಲಿ ಕೊಡು. ಈ ಸಂಗತಿ ಯನ್ನು ಯಾರಿಗೂ ಹೇಳಬೇಡ.

ತರಲಿಕಾ:-ಮಹನೀಯರೇ ಅಪ್ಪಣೆಯಂತೆ ವರ್ತಿಸುವೆನು. (ಎಂದು ನಮಸ್ಕರಿಸಿ ಹೋಗುವಳು.)

ಪುಂಡರೀಕ:—ಮಾಡತಕ್ಕಷ್ಟು ಪ್ರಯತ್ನವನ್ನೇನೋ ಮಾಡಿ ದೆನು. ಮುಂದೆ ಎಲ್ಲಿಗೆ ಹತ್ತುತ್ತದೆಯೋ ಹತ್ತಲಿ. ಸದ್ಯಕ್ಕೆ ಆ ಲತಾ ಮಂಟಪದಲ್ಲಿ ಸ್ವಲ್ಪ ವಿಶ್ರಮಿಸುವೆನು. (ಹೋಗುವನು.)

ಕಪಿಂಜಲ:—(ಪ್ರವೇಶಿಸಿ) ಶಿವ ಶಿವ! ಮೋಕ್ಷಾಪೇಕ್ಷಿಯಾದ ನನ್ನಂಥ ಬ್ರಹ್ಮಚಾರಿಗೆ ಸಹ ಮಿತ್ರವಿರಹವು ಈ ಪರಿ ತಾಪನೀಡುವದೆಂದ ಮೇಲೆ ಸಂಸಾರಿಕರಿಗೆಷ್ಟಾಗಬೇಡ! ಪ್ರಿಯ ಮಿತ್ರನು ಅಗಲಿರುವದರಿಂದ ಮನಸ್ಸಿಗೆ ಲೇಶವಾದರೂ ಉಲ್ಲಾಸವಿರುತ್ತಿರಲಿಲ್ಲ. ಹ್ಯಾಗಾದರೂ ಮಾಡಿ ಅವನನ್ನು ಹುಡುಕಲಿಕ್ಕೆ ಬೇಕು. ಲಜ್ಜೆಯು ಮೂಲಕವಾಗಿ

ಅವನು ಪ್ರಾಣತ್ಯಾಗ ಮಾಡಿಕೊಳ್ಳಲಿಕ್ಕೆ ಸಹ ಹಿಂದೆ ಮುಂದೆ ನೋಡು ವವನಲ್ಲ. (ನೋಡಿ) ಹಾ! ಇದೇ ಸರೋವರದ ದಂಡೆಯೆಂಬಂತೆ ತೋರುತ್ತದೆ. ಒಂದು ವೇಳೆ ಆ ತರುಣಿಯನ್ನು ಹಿಂಬಾಲಿಸಿ, ನನ್ನ ಮಿತ್ರನು ಇಲ್ಲಿಯ ವರೆಗೆ ಬಂದಿದ್ದರೂ ಬಂದಿರಬಹುದು. ಇಲ್ಲವೆ ಅವಳು ಮನೆಗೆ ಹೋಗಿರುವಳೆಂದರಿತು ನಿರಾಶನಾಗಿ ಎಲ್ಲಿಯಾದರೂ ಕುಳಿತಿರ ಬಹುದು. ಆಗಲಿ ಮುಂದೆ ಸಮೀಪದಲ್ಲಿಯೇ ನಿಬಿಡವಾದ ಒಂದು ಲತಾ ಮಂಟಪವು ಕಂಡು ಬರುವದು; ಅಲ್ಲಿಗೆ ಹೋಗಿ ನೋಡುವೆನು.

---

## ಮೂರನೇ ಪ್ರವೇಶ.

(ಸ್ಥಳ:—ಅಚ್ಛೋದಸರೋವರದ ತೀರದಲ್ಲಿದ್ದ ಲಂತಾಮಂಟಪ.)

(ಪುಂಡರೀಕನು ಮುಕ್ತಾಹಾರವನ್ನು ಹಿಡಿದುಕೊಂಡು ಕುಳಿತಿರುವನು.)

ಪುಂಡರೀಕ:—||ಪದ|| ರಾಗ—ಮುಖಾರಿ, ತಾಳ—ಆದಿ.

ಪ್ರಿಯ ಹಾರವೇ ಸುದತಿಯ ಗಳಕಂದಲವಗಲಿದೆಯಾ ಮರುಳೇ
ಮನೋಹರೆ ||ಪಲ್ಲ||
"ಹತಭಾಗಿಯು ನಾ"ನೆನ್ನದಿರ್ ಮನದೊಳ್ ||
ಖತಿಯನು ಬಿಡುತ್ವತ್ಸಖಿಯನು ತೋರುವೆ ನಿಜದೆ ||೧||

ಪ್ರಿಯ ಹಾರವೆ ನಿನ್ನನ್ನು ಆ ಗಂಧರ್ವಕನ್ಯೆಯಿಂದ ಅಗಲಿಸಲಿಕ್ಕೆ ನಾನೇ ಕಾರಣನಾದೆನಲ್ಲವೆ! ಆಗಲಿ ಈ ವಿಷಯವಾಗಿ ನನ್ನ ಮೇಲೆ ಸಿಟ್ಟಾಗಬೇಡ; ನೀನು ಅವಳನ್ನಗಲಿ ಬಳಲುತ್ತಿರುವಂತೆ ನಾನಾದರೂ ಬಳಲುತ್ತಿರುವೆನು. ಭಗವಂತನ ಕೃಪೆಯಿದ್ದರೆ ನಾವೀರ್ವರೂ ಪುನಃ ಅವಳನ್ನು ಹೊಂದಬಹುದು. ಹಾ! ಪ್ರಿಯೆ ಮಹಾಶ್ವೇತೆ ಬಹುಬೇಗ ಬಂದು ನಮ್ಮೀರ್ವರ ಮನೋ ದುಃಖವನ್ನು ಶಾಂತಮಾಡಬಾರದೆ!

ಕಪಿಂಜಲ:—(ಪ್ರವೇಶಿಸಿ ಹತ್ತರ ಹೋಗಿ ಆನಂದದಿಂದ) ಹಾ!

ನಿಶ್ಚಯ, ಇವನೇ ನನ್ನ ಮಿತ್ರನು. ಛೀ ಛೀ! ಅಲ್ಲ; ಇವನು ಯಾವನೋ ಒಬ್ಬ ನಿಸ್ತೇಜನಾದ ತಪಸ್ವಿಯಿರಲಿಕ್ಕೆ ಬೇಕು. (ಮೆಲ್ಲನೆ ನೋಡಿ) ನನ್ನ ದೃಷ್ಟಿಯು ಮಂದತ್ವವನ್ನು ಜೇರಿ ತಾಳಿಲ್ಲವಷ್ಟೇ? ನಿಜ, ಮಿತ್ರ ಪುಂಡರೀಕನು ಇವನೇ. ಹಾ! ಮಿತ್ರಾ ಏನು ನಿನ್ನ ಅವಸ್ಥೆಯಾಯಿತಲ್ಲ! (ಹತ್ತರ ಹೋಗಿ ಬಾಳೇ ಎಲೆಯಿಂದ ಅವನಿಗೆ ಗಾಳೀಬೀಸಹತ್ತುವನು.)

ಪುಂಡರೀಕ:—ಛೀ ಛೀ! ಪ್ರಿಯೇ ಮಹಾಶ್ವೇತೆ, ನಿನಗೇಕೆ ಇಷ್ಟು ಶ್ರಮ............[ಕಪಿಂಜಲನೆಂಬದನ್ನರಿತು.] ಹಾ! ಪ್ರಿಯೆಯು ಅಲ್ಲ; ಮಿತ್ರ ಕಪಿಂಜಲನು. ಹಾಯ್! ಹಾಯ್! ಮನ್ಮಥನೇ ಮತ್ತೂ ನನ್ನ ಉಪಹಾಸವನ್ನೇ ನಡೆಯಿಸಿರುವೆಯಾ?

ಕಪಿಂಜಲ:—(ಅವನ ಹತ್ತರ ಕುಳಿತು ಹೆಗಲಮೇಲೆ ಕೈಯಿಟ್ಟು) ಮಿತ್ರಾ ಪುಂಡರೀಕಾ, ಇದೇನು ಆರಂಭಿಸಿರುವೆ? ಎಲ್ಲಿರುವಳು ಮಹಾ ಶ್ವೇತೆಯು?

ಪುಂಡರೀಕ:—ಮಿತ್ರಾ ಕಪಿಂಜಲಾ, ದೈವಗತಿಯು ವಿಚಿತ್ರ ವಾದದ್ದು! ನನ್ನ ದುರ್ದೈವಕ್ಕೆ ಯಾರೇನು ಮಾಡುವರು? ನನ್ನ ಮನ ಸ್ಸಿನ ಬಲವು ನಿನಗೆ ವಿದಿತವಾದದ್ದೇ ಅದೆ. ಅಂದ ಮೇಲೆ ಸುಮ್ಮನೇ ಯಾತಕ್ಕೆ ನನ್ನನ್ನು ಲಜ್ಜಿತನಾಗುವಂತೆ ಮಾಡುವೆ?

ಕಪಿಂಜಲ:— ನಿಜ, ಯಾವತ್ತೂ ವೃತ್ತಾಂತವನ್ನು ಅಂತರ್ಜ್ಞಾನ ದಿಂದ ತಿಳಿದುಕೊಂಡಿರುವೆನು. ಆದರೆ ನಿನಗೆ ಈ ಆಚರಣೆ ಸರಿಯಾಗು ವದೇನು? ಖ್ಯಾತಿವಂತನಾಗದೆ ಕೋತಿಯಂತೆ ಆ ತರುಣಿಗೆ ಮನಸೋತೆ ಯಲ್ಲ! ಮಿತ್ರಾ ಹೇಳು; ಗುರುಗಳಿಂದ ಉಪದಿಷ್ಟವಾದ ನಿನ್ನ ಧರ್ಮಶಾಸ್ತ್ರ ಪಠಣವು ಇದೇ ಏನು? ತಪಃಸಿದ್ಧಿಯ ಸಾಧನದ ಮಾರ್ಗವಾದರೂ ಇದೇ ಇರಬಹುದೆಂದು ಕಂಡುಕೊಂಡೆಯೇನು? ಇದು ಮೋಕ್ಷ ಲಾಭದ ರಹ ಸ್ಯವಿರುವದೆಂಬದನ್ನು ಯಾವ ಯುಕ್ತಿಯಿಂದ ಕಂಡು ಹಿಡಿದೆ? ಸಾಧು ಜನರಿಗೆ ನಿಂದ್ಯವಾದ ಈ ಕೃತ್ಯವು ನಿನಗೆ ಹೇಗೆ ರುಚಿಸಿತು? ಹೇಳು

ಯಾಕೆ ಮಾತನಾಡಲೊಲ್ಲೆ? ನಿನ್ನ ಜಾಗ್ರತೆಯೂ ವಿವೇಕಧನವೂ ಎಲ್ಲಿ ಹೋದವು? ಕಾಮುಕರು ತಮ್ಮ ಅಜ್ಞಾನದ ಮೂಲಕವಾಗಿ ಯಾವ ಮಾರ್ಗವನ್ನು ಸ್ವೀಕರಿಸುವರೋ ಆ ಮಾರ್ಗದ ನೆನಪು ಸಹ ನಿನ್ನಂಥ ಜ್ಞಾನವಂತನ ಮನಸ್ಸಿನಲ್ಲಿ ಬರಕೂಡದು. ಒಂದುವೇಳೆ ಬಂದರೆ ನಿಶ್ಚಯವಾಗಿ ಪಾಪಕ್ಕೆ ಪಾತ್ರನಾದಂತಾಗುವದು. ಹೀಗಿರಲು ಅದೇ ಮಾರ್ಗಕ್ಕೆ ನೀನು ಪ್ರವರ್ತಿಸಿದೆಯೆಂದಮೇಲೆ, ಈ ವಿಷಯವಾಗಿ ನಿನಗೆ ಏನು ಹೇಳಬೇಕು? ಮಿತ್ರಾ ಇದರಿಂದ ಸುಖವಾಗಬಹುದೆಂದು ನೀನು ತಿಳಿದು ಕೊಂಡಿರಬಹುದು. ಬೇಡ ಬೇಡ, ಅದರ ಕಲ್ಪನೆಯನ್ನು ಸಹ ನಿನ್ನ ಮನಸ್ಸಿನಲ್ಲಿ ತರಬೇಡ; ನೋಡು, ವಿಚಾರಿಸು, ಉತ್ತಮಕೇಶರವನ್ನು ಬಿಟ್ಟು ಕೆಸರನ್ನು ಮೈಗೆ ತೊಡೆದುಕೊಂಡಂತಾಗುವದಿಲ್ಲವೆ?

ಪುಂಡರೀಕ:— ಮಿತ್ರಾ ಕಪಿಂಜಲಾ, (ಕುತ್ತಿಗಿಗೆ ಕೈಹಾಕಿ) ಸ್ಮರನೆಂಬ ಪಿಶಾಚವು ನನ್ನನ್ನು ಆಕ್ರಮಿಸಿಕೊಂಡಿರುವದರಿಂದ ನೀನು ಹೇಳತಕ್ಕ ಯಾವ ಮಾತುಗಳೂ ನನಗೆ ಕೇಳಿಸಲೊಲ್ಲವು. ಇಂದ್ರಿಯಚಾಲಕವಾದ ಮನಸ್ಸೇ ಸಂಪೂರ್ಣವಾಗಿ ಕಾಮದೇವನ ಸೇವೆಮಾಡಹತ್ತಿದಮೇಲೆ ನಾನಾದರೂ ಏನು ಮಾಡಲಿ?

ಕಪಿಂ:—ಪುಂಡರೀಕಾ, ನಿನ್ನಂಥ ಜ್ಞಾನವಂತನಾದ ಜಿತೇಂದ್ರಿಯನ ಮನಸ್ಸು ಕಾಮಪರವಶವಾಗಬೇಕೇ? ಛೀ!

||ಪದ|| ರಾಗ—ತೋಡಿ, ತಾಳ—ಆದಿ.

ಏಕಿಂತು ಪಿಡಿಯುವಿಯವಿಚಾರಪಥವನು ||ಪಲ್ಲ||
ಸಾಕಿನ್ನುಬಿಡುಬಿಡು ವಿಕಾರವನು ನೀಂ ನಿಶ್ಚಿಸೈ ||ಅ. ಪ||
ದೂರಸರಿಸು ನೀಂ ನಿನ್ನನು ಪೀಡಿಪ |
ಮಾರನೆಂಬಬಹುನಿರ್ದಯಾಧಿಕನನವನದಾವಮಹಿಮಂ ||೧||

ನಿನ್ನ ಜ್ಞಾನಬಲದಿಂದ ಪಾಮರನಾದ ಆ ದುಷ್ಟ ಮನ್ಮಥನನ್ನು ದೂರಸರಿಸು. ಅವನಿಗೆ ಭಯಪಡಬೇಡ; ಮನೋನಿಗ್ರಹಿಯಾಗು. ತುಂಬಿದ

ನದಿಯ ಶಾಖೆಗಳು ಒಳ್ಳೇ ವೇಗದಿಂದ ಹರಿಯಹತ್ತಿದಂತೆ ನಿನ್ನ ಇಂದ್ರಿಯ ಗಳು ಮಿತಿಮೀರಿ ಚಲಿಸಹತ್ತಿರುವವು. ಅವುಗಳನ್ನು ಬಿಗಿಹಿಡಿ. ಇಲ್ಲದಿದ್ದರೆ ದೀವಿಗೆಗೆ ಮೋಹಿಸಿ, ಅದರಲ್ಲಿ ಬಿದ್ದು ಸುಟ್ಟು ಭಸ್ಮವಾಗುವ ಪತಂಗದಂತೆ ನಿನ್ನ ಗತಿಯಾಗುವದು; ಮಿತ್ರಾ ಸಾವಧಾನಚಿತ್ತದಿಂದ ವಿಚಾರಿಸು.

ಪುಂಡರೀಕ:—ನೀನು ಹೇಳುವದೆಲ್ಲ ಯೋಗ್ಯವು; ಆದರೆ, ಆ ಮನ್ಮಥನು ನನ್ನ ಮೇಲೆ ಬಾಣಪ್ರಯೋಗಮಾಡಿದಂತೆ ನಿನಗೆ ಮಾಡದ್ದ ರಿಂದ, ನಿನ್ನಲ್ಲಿ ಈ ವಿಷಯವಾಗಿ ಯಾವತರದ ಕಲ್ಪನೆಗಳೂ ಬರಲಾರವು. ಪ್ರತಿಯೊಬ್ಬನು ನೋಡುತ್ತಾನೆ, ಕೇಳುತ್ತಾನೆ, ಹಾಗು ವಿಚಾರಿಸು ತ್ತಾನೆ; ಆದರೆ ನಾನು ಮಾತ್ರ ಅಂಧನಾಗಿಹೋದೆನು. ನನ್ನಲ್ಲಿಯ ಸುಜ್ಞಾ ನವಂತೂ ಈ ಮೊದಲೇ ಕೈಬಿಟ್ಟು ಹೋಗಿರುವದು. ಅಂದಮೇಲೆ ವ್ಯರ್ಥವಾದ ನಿನ್ನ ಉಪದೇಶದಿಂದ ಯಾತಕ್ಕೆಷ್ಟು ಪೀಡಿಸುವೆ?

ಕಪಿಂ:—ವಾಃ! ನಾನೇ ಇದರಲ್ಲಿ ಮೂರ್ಖನಾಗಿಹೋದೆನೋ? ಇಗೋ ಹಾಗಾದರೆ ನಾನು ಹೊರಟೆನು; ನಿನ್ನ ಮಾರ್ಗವು ನಿನಗೆ ಸುಖ ಪ್ರದವಾಗಲಿ. (ಹೋಗಲುದ್ಯುಕ್ತನಾಗುವನು.)

ಪುಂಡರೀಕ:—ಛೇ ಛೇ! ಮಿತ್ರಾ ನನ್ನ ಮೇಲೆ ಹೀಗೆ ಕೋಪ ಗೊಳ್ಳಬೇಡ.

||ಪದ|| ರಾಗ—ತೋಡಿ, ತಾಳ—ಆದಿ.

ಆರಿರುವರುಪೇಳ್ ಜಗದೊಳ್ ||ಪ||
ಧೀರಸುಮಿತ್ರನೆ ಹಿತವರು ನಿನ್ನೊಲ್ ||ಅ. ಪ||
ತೊರೆದೊಡೆ ಗೆಳೆಯನೆ ಕೋಪಗೊಳ್ಳುತೆ ನೀಂ |
ಒರೆಯಲಿ ನಾ ನಿನ್ನಾರೊಳುಮನ್ಯವಂ ||೧||

ಮಿತ್ರಾ, ಹೇಗಾದರೂ ಮಾಡಿ ನನ್ನ ಅಪರಾಧವನ್ನು ಹೊಟ್ಟೆಯಲ್ಲಿ ಹಾಕಿಕೋ; ನಿನ್ನ ಹೊರತು ನನಗೆ ಅನ್ಯರಾರೂ ಹಿತಚಿಂತಕರಿಲ್ಲ (ಇಷ್ಟು ಮಾತನಾಡುತ್ತಲೇ ಮೂರ್ಛಿತನಾಗಿ ಬೀಳುವನು.)

ಕಪಿಂಜಲ:—(ಅವನನ್ನು ಹಿಡಿದುಕೊಂಡು) ಅಹಹ! ಪ್ರಬಲ ಸಂತಾಪದಿಂದ ನನ್ನ ಮಿತ್ರನು ಮೂರ್ಛಿತನಾದನಲ್ಲ! (ಬಾಳೀಎಲೆಯಿಂದ ಗಾಳೀ ಹಾಕುವನು.) ಇವನ ಸ್ಥಿತಿಯು ಈಗ ಕಾಮೋದ್ರೇಕದ ಶಿಖರಕ್ಕೆ ಮುಟ್ಟಿತು; ವ್ಯರ್ಥವಾಗಿ ಇವನಿಗೆ ಉಪದೇಶಮಾಡುವ ಕೆಲಸಕ್ಕೆ ತೊಡಗಿದೆನು. ಈಗ ಇವನ ಮದನಜ್ವರಗಳು ಕಡಿಮೆಯಾಗುವ ಬಗೆಯಾದರೂ ಹೇಗೆ? ಇದಕ್ಕೆ ಗುಣಕಾರಿಯಾದ ನಿಜವಾದ ಔಷಧವೆಂದರೆ, ಗಂಧರ್ವಕನ್ಯೆಯಾದ ಮಹಾಶ್ವೇತೆಯೇ ಸರಿ. ಆದರೆ ಅವಳು ಹೇಗೆ ಪ್ರಾಪ್ತಳಾಗಬೇಕು? ಇರಲಿ, ಈ ಕೆಲಸದಲ್ಲಿ ವ್ಯರ್ಥ ಕಾಲಹರಣಮಾಡುವದು ಒಳಿತಲ್ಲ. ಪ್ರಸಂಗದಲ್ಲಿ ಏನಾದರೂ ಪ್ರಯತ್ನಮಾಡಿ, ಮಿತ್ರನ ಪ್ರಾಣವನ್ನು ರಕ್ಷಿಸಬೇಕೆಂದು ಶಾಸ್ತ್ರವು ಹೇಳುತ್ತದೆ. ಆದ್ದರಿಂದ ನಾನು ಈ ಸಮಯವನ್ನು ಕಳೆದುಕೊಳ್ಳಕೂಡದು. ಇವನಿಗೆ ಏನಾದರೂ ಒಂದು ಕಾರಣವನ್ನು ಹೇಳಿ ಸಮಾಧಾನಗೊಳಿಸಿ ಈ ಕ್ಷಣವೇ ಮಹಾಶ್ವೇತೆಯ ಬಳಿಗೆ ಹೋಗಿ ಅವಳಿಗೆ ವಿನಂತಿ ಮಾಡಿಕೊಳ್ಳುವೆನು. ಮುಂದೆ ಏನಾಗುತ್ತದೋ ಆಗಲಿ. ಇದರ ಹೊರತು ಅನ್ಯಮಾರ್ಗವೇನೂ ಇರುತ್ತಿರಲಿಲ್ಲ. ಮಿತ್ರಾ ಪುಂಡರೀಕಾ, ತಾಳು ತಾಳು!

ಪುಂಡರೀಕ:—(ಸ್ವಲ್ಪ ಹೊತ್ತಿನ ಮೇಲೆ) ಮಿತ್ರಾ ರಕ್ಷಿಸು! ರಕ್ಷಿಸು! ನನ್ನ ಪ್ರಾಣವು ವ್ಯಾಕುಲವುಳ್ಳದ್ದಾಗಿದೆ, ಶಾಂತಗೊಳಿಸು.

ಕಪಿಂಜಲ:—ಭಯಪಡಬೇಡ. (ತನ್ನಲ್ಲಿ) ಅಹಹ! ಒಳ್ಳೇ ಯೋಗ್ಯವಾದ ಹಂಚಿಕೆಯು ತೋಚಿತು. (ಪ್ರಕಾಶವಾಗಿ) ಮಿತ್ರಾ, ನಾನು ಪುಷ್ಪಗಳನ್ನೆತ್ತುತ್ತಿರುವಾಗ ಅತ್ಯುತ್ತಮವಾದ ಒಂದು ಔಷಧಿಯನ್ನು ನೋಡಿರುವೆನು. ಅದು ಇಲ್ಲಿಯೇ ಸಮೀಪದಲ್ಲಿರುವದು. ಅದರ ರಸವನ್ನು ಅಂಗಕ್ಕೆ ಲೇಪಿಸಿದರೆ, ಮಿತಿಮೀರಿದ ಕಾಮಸಂತಾಪವೂ ಸಹ ನಿಃಶೇಷವಾಗಿ ಹೋಗುವದೆಂದು ಕೇಳಿದ್ದೇನೆ. ಆದದ್ದರಿಂದ ಆ ದಿವ್ಯೌಷಧಿಯನ್ನು ತರಲಿಕ್ಕೆ ಹೋಗುವೆನು. ಅಲ್ಲಿಯವರೆಗೆ ಧೈರ್ಯವನ್ನು ಮಾತ್ರ ಹಿಡಿದಿರು.

ತುಸು ಹೊತ್ತಿನಲ್ಲಿಯೇ ಬರುವೆನು.

ಪುಂಡರೀಕ:—ಮಿತ್ರಾ, ಕಾಮಸಂತಾಪವು ಔಷಧದಿಂದ ಗುಣವಾಗುವದೇನು?

ಕಪಿಂಜಲ:—ಹೌದು.

ಪುಂಡರೀಕ:—ಹಾಗಾದರೆ ಹೊರಡು; ಅದನ್ನಾದರೂ ಬೇಗ ತೆಗೆದುಕೊಂಡು ಬಾ.

ಕಪಿಂಜಲ:—ಅತಿ ತೀವ್ರ ತರುವೆನು. ಅಲ್ಲಿಯವರೆಗೆ ಇಲ್ಲಿಯೇ ಮಲಗಿಕೊಂಡಿರು (ಎಂದು ಹೋಗುವನು.)

---

## ನಾಲ್ಕನೇ ಪ್ರವೇಶ.

(ಸ್ಥಳ:—ಮಹಾಶ್ವೇತೆಯ ಮಂದಿರ)

ಮಹಾ:—(ಪಲ್ಲಂಗದ ಮೇಲೆ ಮಲಗಿಕೊಂಡು)

||ಪದ|| ("ಕೃಷ್ಣ ಮುರಾರಿ" ಎಂಬಂತೆ)

ಇನಿಯನಗಲಿ ಜಗದೆ ಜೀವಿಪುದುದೆಂತು ನಾಂ ||ಪಲ್ಲ||
ಸಖನವ ಮರೆದಡೆ ಸುಖವನು ಪೊಂದುವದೆಂತು ನಾಂ |
ಮುಖಕಮಲವು ಕಂದಿತಿದು ದಿಟವು ಮಾರನುರಿಪನೆನ್ನಂ ||೧||

ಹಾಯ್! ಹಾಯ್! ಮನ್ಮಥನೆ, ಯಾತಕ್ಕಿಷ್ಟು ಪೀಡಿಸುವೆ? ಪ್ರಿಯಾ ಮುನಿಕುಮಾರಾ, ನಿನ್ನನ್ನು ಅಗಲಿ ಹೇಗೆ ಜೀವಿಸಲಿ? (ಎಡಗೈ ಮೇಲೆ ಮುಖವನ್ನಿಟ್ಟು ವಿಚಾರಿಸುತ್ತ ಕೂಡ್ರುವಳು.)

ಪರಭೃತಿಕೆ:—ದೇವಿಯವರೇ, ಇದೇನು? ಇಂದು ಸ್ನಾನ ತೀರಿಸಿಕೊಂಡು ಬಂದಾಗಿನಿಂದ ಯಾರ ಸಂಗಡಲೂ ಮಾತಿಲ್ಲ-ಕಥೆಯಿಲ್ಲ; ಸುಮ್ಮನೇ ಇರುವಿರಿ. ನಿಮಗೆ ಹೇಗಾಗುತ್ತದೆ?

ಮಹಾಶ್ವೇತಾ:—ಏನೂ ಆಗುವದಿಲ್ಲ. ಬಿಸಿಲಿನ ತಾಪದಿಂದ

ಶರೀರಕ್ಕೆ ಸ್ವಲ್ಪ ಆಯಾಸವುಂಟಾಗಿರುವದು.

ಪರಭೃತಿಕೆ:—ತಡೆಯಿರಿ ಹಾಗಾದರೆ, ಬೀಸಣಿಕೆಯಿಂದ ಗಾಳೀ ಹಾಕುವೆನು; ಅಂದರೆ ತಮ್ಮ ಶರೀರ ಸಂತಾಪವು ಸ್ವಲ್ಪವುಟ್ಟಿಗಾದರೂ ಕಡಿಮೆಯಾಗಬಹುದು.

ಮಹಾಶ್ವೇತಾ:—ಇರಲಿ ಹೋಗು, ಈಗ ಯಾವದೂ ಬೇಕಾಗಿಲ್ಲ, ತರಲಿಕೆಯು ಬರುವವರೆಗೆ ನೀನು ಬಾಗಿಲಲ್ಲಿ ನಿಲ್ಲು; ಅವಳ ಹೊರತು ಎರಡನೆಯವರನ್ನು ಒಳಗೆ ಬಿಡಬೇಡ.

ಪರಭೃತಿಕೆ:—ಒಳ್ಳೇದು ಹಾಗೇ ಮಾಡುವೆನು. (ತನ್ನಲ್ಲಿ) ಇದೇನು? ಇವಳ ಇಂದಿನ ಸ್ಥಿತಿಯು ವಿಲಕ್ಷಣವಾಗಿ ತೋರುವದು! (ಪ್ರಕಾಶವಾಗಿ)ಹಾ! ತರಲಿಕೆಯು ಬಂದಳು. ತರಲಿಕೇ, ಬಂದೆಯಾ ಬಾ, ಒಳಿತಾಯಿತು; ತಾಯಿಯವರು ನಿನ್ನ ಹಾದಿಯನ್ನೇ ನೋಡುತ್ತಿದ್ದರು. ಅಗೋ ನೋಡು, ಮೇಲಿಂದ ಮೇಲೆ ಖಿಡಿಕೆಯಹತ್ತರ ಬರುತ್ತಾರೆ ಪುನಃ ತಿರುಗಿ ಹೋಗುತ್ತಾರೆ. ಸ್ನಾನ ತೀರಿಸಿಕೊಂಡು ಬಂದಾಗಿನಿಂದ ಹೀಗೆಯೇ ನಡೆದದೆ. ಇದರ ಕಾರಣವು ನಿನಗೆ ಗೊತ್ತಿರಬಹುದು?

ತರಲಿಕಾ:—ಕಾರಣವೇತರದು! ಈ ವಯಸ್ಸಿಗೆ ಹೀಗೆ ಆಗ ತಕ್ಕದ್ದೆಂಬದು ನಿನಗಾದರೂ ಗೊತ್ತಿದ್ದದ್ದೇ ಅದೆ. ಇರಲಿ ನೀನು ಈಗ ಹೋಗು, ಪುನಃ ತಾಯಿಯವರ ಊಟ-ಉಡಿಗೆ ತೀರಿದ ಬಳಿಕ ಬಾ. (ತನ್ನಲ್ಲಿ) ಈಗ ಇವಳು ಏನು ಮಾಡುತ್ತಾಳೆಂಬದನ್ನು ಸ್ವಲ್ಪ ಹೊತ್ತು ನೋಡಿ, ತರುವಾಯ ಈ ಪತ್ರವನ್ನು ಕೊಡುವೆನು.

ಮಹಾ:—(ತನ್ನಲ್ಲಿ) ಇದೇನು? ನಾನು ಸ್ವಪ್ನದಿಂದಿರುವೆನೋ ಎಚ್ಚರದಿಂದಿರುವೆನೋ? ಅಳುತ್ತಿರುವೆನೋ ನಗುತ್ತಿರುವೆನೋ? ಸರೋವರದಲ್ಲಿರುವೆನೋ ಅರಮನೆಯಲ್ಲಿರುವೆನೋ? ಆ ಮುನಿಕುಮಾರನ ಸಂಗಡ ಮಾತಾಡುತ್ತಿರುವೆನೋ ಮೌನವನ್ನು ತಾಳಿರುವೆನೋ?

ಹಾಯ್ ಹಾಯ್! ಏನು ನನ್ನ ಅವಸ್ಥೆಯಾಯಿತಲ್ಲ! (ಎಂದು ಖಿಡಿಕೆಯಲ್ಲಿ ಹಣಿಕಿಹಾಕುವಳು.)

ತರಲಿಕಾ:—(ತನ್ನಲ್ಲಿ) ಹಾ ಪರಭೃತಿಕೆ ಹೇಳಿದ್ದು ನಿಜ. ಅಗೋ ನೋಡು ಮತ್ತೆ ಖಿಡಿಕೆಹತ್ತರ ಬಂದಳು. ಆ ಮುನಿಕುಮಾರನ ದರ್ಶನ ದಿಂದ ಇವಳ ಸ್ಥಿತಿಯಲ್ಲಿ ಈ ತರದ ಹೆಚ್ಚು ಕಡಿಮೆಯಾಗಿರುವದು. ಇದ ರಲ್ಲಿ ಏನೂ ಸಂಶಯವಿಲ್ಲ.

ಮಹಾ:— (ಎಡಗಿವಿಯಮೇಲೆ ಕೈಯನ್ನಿಟ್ಟು ಗಾಬರಿಯಾಗಿ ದೊಡ್ಡ ಧ್ವನಿಯಿಂದ) ಅವ್ವಯ್ಯ! ನನ್ನ ಕಿವಿಯೊಳಗಿನ ಪುಷ್ಪಮಂಜ ರಿಯೇ ಇಲ್ಲವಲ್ಲ!

ತರಲಿಕಾ:—(ಮುಂದೆಬಂದು) ಸಖೀ ಮಹಾಶ್ವೇತೆ, ಬಲಗಿವಿಯ ಲ್ಲಿಟ್ಟುಕೊಂಡು ಎಡಗಿವಿಯಲ್ಲಿ ನೋಡಿದರೆ ಎಲ್ಲಿಂದ ಬರಬೇಕು?

ಮಹಾ:—ಸಖೀ ತರಲಿಕೆ, ಈ ದಿವಸ ನನಗೆ ಇಂಥ ಸಂಶಯಗಳೇ ಬರಹತ್ತಿರುವವಲ್ಲ? ಈ ವರೆಗೆ ನೀನು ಎಲ್ಲಿ ಇದ್ದೆ?

ತರಲಿಕಾ:—ಇತ್ತ ನೀವೆಲ್ಲರೂ ಸ್ನಾನತೀರಿಸಿಕೊಂಡು ಮನೆಗೆ ಬರುತ್ತಿದ್ದಿರಿ, ಅತ್ತ ನಾನು ಕಮಲಪುಷ್ಪಗಳನ್ನು ಎತ್ತುತ್ತಿದ್ದೆನು. ಆ ವೇಳೆಯಲ್ಲಿ ಯಾವ ಮುನಿಕುಮಾರನು ನಿನ್ನ ಕಿವಿಯಲ್ಲಿ ಪುಷ್ಪಮಂಜರಿ ಯನ್ನಿಟ್ಟಿದ್ದನೋ, ಅವನು ಒಂದು ಗಿಡದ ಗುಂಪಿನೊಳಗಿಂದ ತಟ್ಟನೆ ಬಂದು ನನ್ನೆದುರಿಗೆ ನಿಂತನು.

ಮಹಾ:—ನನ್ನ ಹತ್ತರ ಇದ್ದ ತನ್ನ ಸ್ಫಟಿಕಮಾಲೆಯನ್ನು ಬೇಡಿ ದನಲ್ಲ ಅವನೇ ಏನು?

ತರಲಿಕಾ:—ಹೌದು. ಯಾವನ ಕೈಯಲ್ಲಿ ಸ್ಫಟಿಕಮಾಲೆಯೆಂದು ಹೇಳಿ ನಿನ್ನ ಮುತ್ತಿನಹಾರವನ್ನು ಕೊಟ್ಟಿರುವಿಯೋ ಅವನೇ, ಇಗೋ ತೆಗೆದುಕೋ ಈ ಪತ್ರವನ್ನು ಕೊಟ್ಟಿರುವನು.

ಮಹಾಶ್ವೇತಾ:—ಎಲ್ಲಿದೆ ಬೇಗ ತಾ. (ತೆಗೆದುಕೊಂಡು)—

||ಪದ|| ರಾಗ—ಕಲ್ಯಾಣಿ, ತಾಳ—ಆದಿ("ಕಸಿ ಮದನ" ಎಂಬಂತೆ)

ಇದು ವಿಹಿತವೇನೆಲೆ ಮಾನಿನೀ || ಪಲ್ಲ ||

ಹೃದಯುವನೀಂ ಹರಣವಮಾಳ್ಪುದು || ಅ. ಪ. ||

ಸರಸಮೃಣಾಲವಂ | ತೋರಿಸಿಹಂಸವಂ |

ಕರೆದೊಯ್ಯುವವೊಲ್ ಮನ್ಮಾನಸವಂ ||

ತೋರಿಸಿಮುಕ್ತಾ-| ಹಾರವನೆನಗೆ |

ಸಾರಸಾಕ್ಷಿ ನೀನೊಯ್ವುದು || ೧ || ಇದು—

ಪ್ರಿಯೆ, ನೀನು ಈ ಪದ್ಯಾರ್ಥವನ್ನು ಗ್ರಹಿಸುವಷ್ಟು ಚತುರೆಯೇ ಇರುವಿ. ಆದರೂ ನಿನಗೆ ಅನ್ಯೋಂಗು ಶ್ರಮ ಹತ್ತಬಾರದೆಂದು ಪುನಃ ವಿಶದವಾಗಿ ಹೇಳುವೆನು ಕೇಳು:—ಎಲೆ ಸುಂದರೀ, ಮೃಣಾಲವನ್ನು ತೋರಿಸಿ ಹಂಸಪಕ್ಷಿಯನ್ನು ಕರೆದೊಯ್ಯುವಂತೆ, ನಿನ್ನ ಮುಕ್ತಾಹಾರವನ್ನು ತೋರಿಸಿ ನನ್ನ ಮನಸ್ಸನ್ನು ಹರಣಮಾಡಿದೆ! ಇದು ನಿನಗೆ ವಿಹಿತವೆ?

ನಿನ್ನ ಪ್ರೇಮಾಭಿಲಾಷಿ,

ಪುಂಡರೀಕ.

ತರಲಿಕಾ:—ಸಖೀ, ಪತ್ರದ ಅಭಿಪ್ರಾಯವು ತಿಳಿಯಿತೇ?

ಮಹಾ:—ತರಲಿಕೇ, ಈ ದಿವಸ ನೀನು ನನಗೆ ಅಮೃತಪಾನ ಮಾಡಿಸಿ ಜೀವದಾನಕೊಟ್ಟೆ; ಇಂದಿಗೆ ನೀನೇ ನನಗೆ ಹಿತವಂತೆಯು. ನಿನ್ನ ಈ ಉಪಕಾರವನ್ನು ಹೇಗೆ ತೀರಿಸಲಿ! ಈ ಪತ್ರಿಕೆಯನ್ನು ಎಷ್ಟು ಸಾರೆ ಓದಿದರೂ ಬೇಸರವೇ ಆಗುವಂತಿಲ್ಲ.

ತರಲಿಕಾ:—( ತನ್ನಲ್ಲಿ ) ಯಾವಾಗಲೂ ಕಣ್ಣಮುಂದೆಯೇ ಕಟ್ಟಿಕೋ, ನಿನಗೆ ಪ್ರತಿಬಂಧಿಸುವವರಾರು?

ಕಂಚುಕಿ [ ಪ್ರವೇಶಿಸಿ]:—ಅವ್ವನವರೇ, ಬಾಗಿಲಲ್ಲಿ ಒಬ್ಬ ಮುನಿ ಕುಮಾರನು ಬಂದು ನಿಂತಿರುವನು. ಅವನು ತಮ್ಮ............

ಮಹಾಶ್ವೇತಾ:—(ನಡುವೇ ಬಾಯಿಹಾಕಿ) ಮುನಿಕುಮಾರ!

ತರಲಿಕೇ, ಹಾಗಾದರೆ ಬೇಗ ನಡ ಅವನ ಹತ್ತರ ಹೋಗೋಣ; ಅವನೇ ಆಗಿರಬಹುದು.

ಕಂಚುಕಿ:—ಅವನು ತನ್ನ ಹೆಸರು ಕಪಿಂಜಲನೆಂದು ಹೇಳಿದನು; ಹಾಗೂ ತಮ್ಮನ್ನು ಕಾಣಲಿಚ್ಛಿಸುವನು. ಅಪ್ಪಣೆಯಾದಂತೆ ತಿಳಿಸುವೆನು.

ಮಹಾ:—(ಖಿನ್ನಮುದ್ರೆಯಿಂದ) ಸಖೀ ತರಲಿಕೆ, ಮುನಿಕುಮಾರನು ಬಂದಿರುವನೆಂಬ ಶಬ್ದವು ನನ್ನ ಕಿವಿಗೆ ಬೀಳುತ್ತಲೇ ಯಾವ ಸೌಖ್ಯದ ರಾಶಿಯು ನನ್ನ ಮುಂದೆ ನಿಂತಿತ್ತೋ, ಅದೇ ಈಗ ದುಃಖದ ರಾಶಿಯಾಗಿ ಪರಿಣಮಿಸಿತು. (ಕಂಚುಕಿಗೆ) ಒಳ್ಳೇದು ಹೋಗು ಅವರನ್ನು ಕರೆದುಕೊಂಡು ಬಾ. (ಹೋಗುವನು) ಗೆಳತೀ ತರಲಿಕೆ, ಕಪಿಂಜಲನು ಯಾಕೆ ಬಂದಿರಬಹುದು? ಆ ಮುನಿಪುತ್ರನನ್ನು ಹುಡುಕುವದಕ್ಕೆ ಬಂದಿರಬಹುದೇನು?

ತರಲಿಕಾ:—ಅಗೋ ನೋಡು ಬಂದನು. ನೀನು ತರ್ಕಿಸಿದ ಅಭಿಪ್ರಾಯವನ್ನುದ್ದೇಶಿಸಿ ಅವನು ಬಂದಂತೆ ತೋರುವದಿಲ್ಲ. ಯಾಕಂದರೆ:—ಅವನ ಮುಖಮುದ್ರೆಯು ಬಹು ಕಷ್ಟತರದ್ದಾಗಿ ತೋರುತ್ತದೆ.

ಮಹಾ:--(ಕಪಿಂಜಲನು ಬಂದಕೂಡಲೆ) ಮುನಿಗಳೇ ವಂದಿಸುವೆನು.

ಕಪಿಂಜಲ:—ಅಭೀಷ್ಟಮಸ್ತು! ಅಭೀಷ್ಟಮಸ್ತು!

ಮಹಾ:—ಭಗವನ್, ಈ ಆಸನದ ಮೇಲೆ ಕುಳಿತುಕೊಳ್ಳಬೇಕು. (ಕಪಿಂಜಲನು ಕುಳಿತನಂತರ ತರಲಿಕೆಯು ಕಡೆಗೆ ಸಂಶಯ ಮುದ್ರೆಯಿಂದ ನೋಡಹತ್ತುವನು.) ಮಹನಿಯರೇ ಇವಳು ನನ್ನ ಸಖಿಯು ಬಹು ನಂಬಿಗೆಯುವಳು, ಕಾರಣ ತಮ್ಮ ಮನೋಭಿಪ್ರಾಯವನ್ನೆಲ್ಲ ಒಂದೂ ಉಳಿಯದಂತೆ ಹೇಳಬೇಕಾಗಿ ಬೇಡಿಕೊಳ್ಳುವೆನು.

ಕಪಿಂಜಲ:—ಗಂಧರ್ವಕನ್ಯೇ ಮಹಾಶ್ವೇತೇ ಏನು ಹೇಳಲಿ? ಲಜ್ಜೆಯಿಂದ ನನ್ನ ಮಾತುಗಳೇ ಹೊರಡಲೊಲ್ಲವು. ನಿರ್ವಾಹವಿಲ್ಲದ ಪ್ರಸಂಗ ಬಂದದರಿಂದ ಹೇಳಲಿಕ್ಕೇ ಬೇಕಾಗಿದೆ. ಗಡ್ಡೆ ಬೇರುಗಳನ್ನು

ಸೇವಿಸಿ ಕಾಲಹರಣ ಮಾಡತಕ್ಕ ಆ ಮುನಿಕುಮಾರನೆಲ್ಲಿ? ವಿಷಯವಾಸನೆ ಯೆಲ್ಲಿ? ಯಾವದಕ್ಕೆ ಯಾವದೂ ಸಂಬಂಧವಿಲ್ಲ. ಇರಲಿ, ಭಗವಂತನ ಇಚ್ಛೆ! ಯಾರು ಮಾಡತಕ್ಕದೇನದೆ? ನಿನಗೆ ಹೇಳಿದ ಹೊರತು ಗತ್ಯಂತ ರವೇ ಇಲ್ಲ. ಕೇಳು:—ನಾನು ಪುಂಡರೀಕನ ಮೇಲೆ ಸಿಟ್ಟಾಗಿ ಅವ ನನ್ನು ಬಿಟ್ಟು ಹೊರಟು ಹೋದ ಸಂಗತಿಯಂತೂ ನಿನಗೆ ಗೊತ್ತಿದ್ದದ್ದೇ ಅದೆ. ತರುವಾಯ ತುಸುಹೊತ್ತಿನ ಮೇಲೆ ಮನಸ್ಸು ತಡೆಯದೆ ಅವನು ಏನು ಮಾಡುತ್ತಾನೆಂಬದನ್ನು ನೋಡುವದಕ್ಕಾಗಿ ಪುನಃ ಅದೇ ಸ್ಥಳಕ್ಕೆ ಒಂದೆನು. ಅಲ್ಲಿ ಅವನು ಇದ್ದಿಲ್ಲ. ಆ ಮೇಲೆ ಖಿನ್ನನಾಗಿ ಸಂಚರಿ ಸುತ್ತ ವನದಲ್ಲಿ ಹುಡುಕಹತ್ತಿದೆನು. ಅತ್ತಿತ್ತ ಹುಡುಕುತ್ತಿರುವಷ್ಟರಲ್ಲಿ, ಅಚ್ಛೋದಸರೋವರದ ತೀರದಲ್ಲಿದ್ದ ಒಂದು ಲತಾಮಂಟಪದಲ್ಲಿ, ನೀನು ಕೊಟ್ಟ ಮುಕ್ತಾಹಾರವನ್ನು ಎದೆಗೆ ಅವಚಿಕೊಂಡು, ಕಣ್ಣೀರು ಸುರಿ ಸುತ್ತ ಕುಳಿತ್ತಿದ್ದನು ತಾಯಿ ನಿಜವಾಗಿ ಹೇಳುತ್ತೇನೆ. ಮೊದ ಮೊದಲು ಅವನ ಗುರುತು ಸಹ ನನಗೆ ಹತ್ತಲಿಲ್ಲ ಬಾಲಸೂರ್ಯನಂತೆ ತೇಜಃಪುಂಜನಾಗಿದ್ದ ಆ ನನ್ನ ಮಿತ್ರನು ಮದನಜ್ವಾಲೆಯ ಯೋಗದಿಂದ ನಿಸ್ತೇಜನಾಗಿ ಹೋಗಿದ್ದನು. ಅಂದಮೇಲೆ ಅವನ ಗುರುತಾದರೂ ಹೇಗೆ ಹತ್ತಬೇಕು? ಪ್ರಸಂಗಕ್ಕೆ ಸರಿಯಾಗಿ ಪರಿಪರಿಯಿಂದ ಅವನಿಗೆ ಬೋಧಿಸಿದೆನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಅವನು ನನ್ನ ಉಪದೇಶವನ್ನು ಕೇಳುವಂತೆ ಕೇಳಿ ಕಟ್ಟಕಡೆಗೆ ನನ್ನನ್ನು ಅಪ್ಪಿಕೊಂಡು, "ಮಿತ್ರಾ:—

||ಪದ|| ("ಪಾಂಡುನೃಪತಿ" ಎಂಬಂತೆ.)

ನಾನತಿ ವಿಹ್ವಲನುನಿಜದೆ || ಮನವನಿತ್ತೆಂಮದನವಶದೆ ||
ವನಿತೆದೊರೆಯದಿರಲುಭರದೆ || ಪ್ರಾಣವ್ಹೈದುಗುಂ" ||೧||

ಈ ಪ್ರಕಾರ ಹೇಳಿದನು. ಅವನ ಈ ಉದ್ಗಾರವು ನನ್ನ ಕಿವಿಗೆ ಬೀಳು ತ್ತಲೇ ನಿನ್ನ ಅನುಮತಿಯನ್ನು ಕೇಳುವದಕ್ಕಾಗಿ ಇತ್ತ ಬಂದೆನು. ಈ ಸ್ಥಿತಿ

ಯಲ್ಲಿ ಅವನಿಗೆ ನಿನ್ನ ಹೊರತು ಅನ್ಯರಾರೂ ಪ್ರೀತ್ಯಾಸ್ಪದರಿಲ್ಲ; ನೀನು ಅವನಿಗೆ ಯೋಗ್ಯಳು ಅವನು ನಿನಗೆ ಯೋಗ್ಯನು; ಮತ್ತು ನಿನಗಾದರೂ ಈ ಕಾರ್ಯವು ರುಚಿಸಬಹುದು. ಈ ಕಾರ್ಯವನ್ನು ಕೊನೆಗಾಣಿಸುವ ದಕ್ಕೆ ನೀನು ಸಮರ್ಥಳೇ ಇರುವಿ.

ಮಹಾಶ್ವೇತಾ:—(ತನ್ನಲ್ಲಿ) ಈ ಮುನಿಕುಮಾರನ ಭಾಷಣವನ್ನು ಕೇಳಿ ನಾನು ಅಮೃತಸಾಗರದಲ್ಲಿ ಮುಳುಗಿರುವುದೇನೋ ನಿಜ. ಆದರೆ ಇವನಿಗೆ ಈಗ ಏನು ಹೇಳಲಿ? (ವಿಚಾರಿಸುವಳು.)

ಕಪಿಂಜಲ:—(ತನ್ನಲ್ಲಿ)ಇವಳು ವಿಚಾರದಲ್ಲಿ ತೊಡಗಿದಂತೆ ಕಾಣು ತ್ತದೆ; ಇರಲಿ, ನನ್ನ ಭಾಷಣಕ್ಕೆ ಅನಾದರವನ್ನು ಬೇರೆ ಮಾಡಲಿಲ್ಲವಷ್ಟೇ? ಮತ್ತು ಇವಳಿಗೆ ಸಿಟ್ಟಾದರೂ ಬಂದಂತೆ ತೋರಲಿಲ್ಲ. ನನ್ನ ಮಿತ್ರನ ವಿಷಯವಾಗಿ ದಯವು ಉತ್ಪನ್ನವಾಗಿರುವದೇನೋ ನಿಜ. ಆದರೆ ಸ್ಪಷ್ಟ ಹೇಳಲಿಕ್ಕೆ ಮಾತ್ರ ಲಜ್ಜಿಸಡುವಳು. ಇಷ್ಟೇ ಹೊರತು ಇದರಲ್ಲಿ ಹೆಚ್ಚಿನ ದೇನೂ ಇಲ್ಲ. ಮಿತ್ರ ಪುಂಡರೀಕನಿರುವ ಸ್ಥಳವಂತೂ ಇವಳಿಗೆ ಗೊತ್ತಿ ದ್ದದ್ದೇ ಅದೆ; ನಾನು ಇಲ್ಲಿಂದ ಹೋದನಂತರ ಇವಳು ತನ್ನ ಕಾರ್ಯಕ್ಕೆ ಉಪಕ್ರಮಿಸಬಹುದು. ಆದ್ದರಿಂದ ಈಗ ನಾನು ಹೊರಡುವದುಚಿತವು. (ಪ್ರಕಾಶವಾಗಿ) ಒಳ್ಳೇದು, ಮಹಾಶ್ವೇತೆಯೇ ಇಗೋ ನೋಡು ಸೂರ್ಯನು ಪಶ್ಚಿಮಾಂಬುಧಿಯನ್ನು ಸೇರತೊಡಗಿದನು. ಆ ಲತಾ ಮಂಟಪದಲ್ಲಿ ನನ್ನ ಮಿತ್ರನ ಹೊರತು ಅನ್ಯರಾರೂ ಇಲ್ಲ; ಅವನನ್ನೊಬ್ಬ ನನ್ನೇ ಬಿಟ್ಟು ಇಲ್ಲಿ ನಿಲ್ಲುವದು ಯೋಗ್ಯವಲ್ಲ. ಆದ್ದರಿಂದ ಹೊರಡುವೆನು, ನೀನು ಮಾತ್ರ:—

||ಸಾಕಿ||

ಕರುಣವತೋರುತೆಪ್ರಾಣದದಾನವಮಾಳ್ಪುದುಮತ್ಸವಯಂಗೆ ||
ಕರಗಳಜೋಡಿಸಿ ಪರಿಪರಿಯಲಿನಾಂ ವಿನಯದೆ ಬೇಡುವೆ ನಿನಗೆ ||
ಹರುಷಂಗುಡವಂಗೆ || ಕರುಣಿಸಭೀಷ್ಟವನುಸಖಂಗೆ ||೧||

(ಮಹಾಶ್ವೇತೆಯು ನಮಸ್ಕರಿಸುವಳು ಆ ಮೇಲೆ ಹೋಗುವನು.)

ಮಹಾಶ್ವೇತಾ:—ಸಖೀ, ಕಪಿಂಜಲನು ಹೇಳಿದ ಯಾವತ್ತು ಮಾತುಗಳನ್ನು ಮನಸ್ಸಿನಲ್ಲಿ ತಂದು ವಿಚಾರಿಸಿದರೆ, ಧೈರ್ಯ ಲಜ್ಜೆಗಳನ್ನೆಲ್ಲ ಬಿಟ್ಟು ನನ್ನ ವಿರಹದಿಂದ ನಿಸ್ತೇಜನಾದ ಆ ಮುನಿಕುಮಾರನನ್ನು ವರಿಸಲೇ ಬೇಕೆನಿಸುತ್ತದೆ. ಆದರೆ, ಗುರು-ಹಿರಿಯರಿಗೆ ತಿಳಿಸದೆ ಹೀಗೆ ಮಾಡುವದರಿಂದ ನಾನು ಅಧರ್ಮವತಿಯೆನಿಸಿ ಅವರನ್ನು ಅಪಮಾನಕ್ಕೆ ಗುರಿ ಮಾಡಿದಂತಾಗುತ್ತದೆ. ಇದಕ್ಕೆ ತಕ್ಕ ಉಪಾಯವನ್ನು ನೀನೇ ಸೂಚಿಸು.

ತರಲಿಕೆ:—(ತನ್ನಲ್ಲಿ) ಈಗ ಇವಳಿಗೆ ಪ್ರತಿಕೂಲಿಸಿ ನೋಡುವೆನು; ಅಂದರೆ ಇವಳ ಮನಸ್ಸಿನ ಸಂಪೂರ್ಣ ಒಲವು ತಿಳಿಯುವದು. (ಪ್ರಕಾಶವಾಗಿ)ಸಖೀ, ಮಹಾಶ್ವೇತೆ, ಗುರುಹಿರಿಯರಿಗೆ ತಿಳಿಸದೆ ಈ ಕಾರ್ಯಕ್ಕೆ ಉಪಕ್ರಮಿಸುವದು ಅಧರ್ಮವೆನಿಸುವದಿಲ್ಲವೇ?

ಮಹಾಶ್ವೇತಾ:—ಒಳ್ಳೇದು ನಿನ್ನ ಅಭಿಪ್ರಾಯದಂತೆ ಬಿಟ್ಟದ್ದಾದರೆ, ನನ್ನ ವಿರಹದಿಂದ ಆ ಪ್ರಿಯ ಮುನಿಕುಮಾರನ ಪ್ರಾಣಕ್ಕೆ ಏನಾದರೂ ಅಪಘಾತ ಸಂಭವಿಸಿದರೆ ಆ ಬ್ರಹ್ಮಹತ್ಯದೋಷಕ್ಕೆ ನಾನೇ ಪಾತ್ರಳಾಗುವೆನಲ್ಲವೆ?

ತರಲಿಕೆ:—ಹೌದು ಹೌದು ಪಾಪಕ್ಕೆ ಪಾತ್ರಳಾಗುವಿ. ಹೀಗಾಗದಂತೆ ಆಚರಿಸುವದು ವಿಹಿತವು.

ಮಹಾಶ್ವೇತಾ:—ವಾಃ ನನ್ನ ಕುಲಶೀಲಗಳ ಸಂಬಂಧದಿಂದ ಲಕ್ಷ್ಯಗೊಡುವವರು ನಿನ್ನ ಹೊರತು ಅನ್ಯರಾರೂ ಇಲ್ಲ. ನೀನೇ ನನಗೆ ಹಿತವಂತೆಯು. (ನಿಟ್ಟುಸುರು ಬಿಟ್ಟು) ಸಖೀ ತರಲಿಕೇ, ಇಗೋ ನೋಡಿದೆಯಾ? ನನ್ನ ಈ ತರದ ಸ್ಥಿತಿಯನ್ನು ನೋಡಿ ಈ ಪೂರ್ವದಿಕ್ಕೇ ಚಪ್ಪಾಳೆ ಹೊಡೆದು ನಗುತ್ತಿರುವದು!

ತರಲಿಕೆ:—ಛೇ ಛೇ! ಸಖೀ ಅದು ನಿನ್ನ ಸಲುವಾಗಿ ನಗುವದಿಲ್ಲ. ತನ್ನ ಸವತಿಯ ಕಡೆಗೆ ಹೋಗಿದ್ದ ಚಂದ್ರನು ತಿರುಗಿ ಬಂದದ್ದರಿಂದ

ನಗುತ್ತಿರುವದು!

ಮಹಾ:—ಹಾ! ಮದನಸಖಾ ಚಂದ್ರಾ! ನೀನು ಉದಯಿಸಿ ನಿನ್ನ ಪ್ರಿಯೆಯ ವಿರಹಸಂತಾಪವನ್ನು ಇಲ್ಲದಂತೆ ಮಾಡುವದೇನೋ ನಿಜ. ಆದರೆ ಇದಕ್ಕೆ ವಿಪರೀತವಾಗಿ ನನ್ನ ಸಂತಾಪವನ್ನು ಮಾತ್ರ ಹೆಚ್ಚು ಮಾಡುವಿ. ನನ್ನ ಸಲುವಾಗಿ ಸ್ವಲ್ಪಾದರೂ ದಯೆತೋರಿಸ ಬಾರದೇ!(ನಿಟ್ಟುಸುರುಬಿಟ್ಟು)ಪ್ರಿಯಸಖೀ ರಕ್ಷಿಸು! ರಕ್ಷಿಸು! ಈ ಮದನ-ಚಂದ್ರರ ತಾಪವನ್ನು ನನ್ನಿಂದ ತಾಳುವದಾಗದು. ನಿನ್ನ ತೊಡೆಯ ಮೇಲಾದರೂ ಹಾಕಿ............(ಮೂರ್ಛೆ ಬಂದು ಬೀಳುವಳು.)

ತರಲಿಕೆ:—ಅಹಹ! ಇದಕ್ಕೇನು ಮಾಡಲಿ, ಸಖೀ ಮಹಾಶ್ವೇತೇ ಮಹಾಶ್ವೇತೆ ಇದೇನು ವಿಲಕ್ಷಣವು! ನನಗೆ ಭಯಬರುತ್ತದೆ ಮಾತನಾಡು.

ಮಹಾ:—ಅಹಹ! ಮುನಿಕುಮಾರನ ಹತ್ತರ ಇದ್ದವಳು ಇಷ್ಟರಲ್ಲಿಯೇ ಇಲ್ಲಿಗೆ ಹೇಗೆ ಬಂದೆನು? (ನೋಡಿ) ಗೆಳತೀ ತರಲಿಕೆ, ಈ ಚಂದ್ರನು ಈಗ ನನಗೆ ಮೃತ್ಯುವಿನಂತೆ ಕಾಣಹತ್ತಿದನು. ನಾನು ಇಲ್ಲಿಯೇ ಇದ್ದರೆ ನಿಶ್ಚಯವಾಗಿ ಮರಣಕ್ಕೆ ಗುರಿಯಾಗುವೆನು. ಆದದ್ದರಿಂದ ನನ್ನನ್ನು ಇಲ್ಲಿಂದ ಎಲ್ಲಿಗಾದರೂ ಕರೆದುಕೊಂಡು ಹೋಗು.

ತರಲಿಕೆ:—ಸಖೀ ಮಹಾಶ್ವೇತೆ, ನಿನಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಇನ್ನು ಈ ತರದ ಲಜ್ಜೆಯು ಸಾಕು; ಗುರುಜನಗಳ ದೆಶೆಯಿಂದ ಭಯಪಟ್ಟು ಉಪಯೋಗವಿಲ್ಲ. ಯಾಕಂದರೆ:—ಮದನಚಂದ್ರರ ಸಂತಾಪವನ್ನು ತಡೆಯುವ ಶಕ್ತಿಯು ನಿನ್ನಲ್ಲಿಲ್ಲ. ಆದದ್ದರಿಂದ ದಯಮಾಡಿ ಆ ಮುನಿಕುಮಾರನನ್ನು ಇಲ್ಲಿಗೆ ಕರೆತರುವದಕ್ಕಾಗಿ ನನಗೆ ಆಜ್ಞಾಪಿಸು, ಇಲ್ಲವೆ ನೀನಾದರೂ ಅವನ ಬಳಿಗೆ ನಡೆ; ಸುರಕ್ಷಿತವಾಗಿ ಕರೆದುಕೊಂಡು ಹೋಗುವೆನು.

ಮಹಾ:—ನಡೆ ಹಾಗಾದರೆ, ನನ್ನ ದೇಹದಲ್ಲಿ ಶಕ್ತಿಯಿಲ್ಲ. ಆದದ್ದರಿಂದ ನನ್ನ ಕೈಯನ್ನು ಮಾತ್ರ ಹಿಡಿದುಕೊ, ಪ್ರಾಣವು ನನ್ನ ದೇಹವನ್ನು

ತೊಲಗುವಷ್ಟರಲ್ಲಿಯೇ ಹ್ಯಾಗಾದರೂ ಮಾಡಿ ಆ ಮಹಾತ್ಮನ ದರ್ಶನ ಮಾಡಿಸು.

ತರಲಿಕೆ:—ಇಗೋ ಸಿದ್ಧಳಾಗಿರುವೆನು. ಆದರೆ, ಪ್ರಿಯಜನರ ಬಳಿಗೆ ಹೋಗುವಾಗ ತಾಂಬೂಲಪುಷ್ಪಹಾರಗಳನ್ನೂ, ಸುಗಂಧದ್ರವ್ಯ ಸುವಾಸಿತ ಕರವಸ್ತ್ರ ಮೊದಲಾದವುಗಳನ್ನೂ ತೆಗೆದುಕೊಂಡು ಹೋಗ ಬೇಕಲ್ಲವೆ?

ಮಹಾ:—ಹಾಗಾದರೆ ಅವುಗಳನ್ನು ಬೇಗ ತೆಗೆದುಕೊಂಡು ಬಾ.

ತರಲಿಕೆ:—ಒಳ್ಳೇದು. (ಹೋಗುವಳು)

ಮಹಾ:—(ತನ್ನಲ್ಲಿ) ಅಹಹ! ಇಷ್ಟರಲ್ಲಿಯೇ ನನ್ನ ಸ್ಥಿತಿಯಲ್ಲಿ ಎಷ್ಟು ವ್ಯತ್ಯಾಸವಾಗಿರುವದಲ್ಲ! ತಾರುಣ್ಯಾವಸ್ಥೆಯಲ್ಲಿ ಏನೇನಾಗುತ್ತ ದೆಂಬದು ಈವರೆಗೆ ನನ್ನ ಕನಸುಮನಸಿನಲ್ಲಿ ಸಹ ಇದ್ದಿದ್ದಿಲ್ಲ. ಸಖಿಯರಿಂದ ಕೇಳಿ ಮಾತ್ರ ತಿಳಿದುಕೊಂಡಿದ್ದೆನು; ನಿಜ. ಉಪವರದೆಶೆಯಲ್ಲಾಗುವ ಸ್ಥಿತಿಯು ಅವರ ಅಭಿಪ್ರಾಯದಂತೆ ಈಗ ನನ್ನ ಅನುಭವಕ್ಕೆ ಬಂತು. (ಪ್ರಕಾಶವಾಗಿ)ತರಲಿಕೇ ತರಲಿಕೆ

ತರಲಿಕೆ:—ಇಗೋ ಬಂದೆ ಬಂದೆ.

ಮಹಾ:—ನಡೆ ಹೋಗೋಣ.

ತರಲಿಕೆ:—ಹೋಗುವದೆಲ್ಲಾ ಸರಿ. ಸಂಗಡ ಪರಿಜನರಾರೂ ಬೇಡವೇನು?

ಮಹಾ:—ಯಾತಕ್ಕೆ?

ತರಲಿಕೆ:—ನಮಗೆ ಆಗತಕ್ಕ ಭಯವನ್ನು ನಿವಾರಿಸುವದಕ್ಕೆ?

ಮಹಾ:—ಯಾತರ ಭಯವು?

ತರಲಿಕೆ:—ಪೂಜ್ಯಳೇ, ಆ ಮುನಿಕುಮಾರನ ವಾಸಸ್ಥಾನವು ಸಮೀಪದಲ್ಲಿಲ್ಲ. ರಾತ್ರಿಯ ವೇಳೆಯು. ಮೇಲಾಗಿ ನಟ್ಟಡವಿಯಲ್ಲಿ ಹಾಯ್ದು ಹೋಗಬೇಕಾಗುವದು. ಇಂಥ ಸ್ಥಿತಿಯಲ್ಲಿ ಅಂಜಿಕೆ ಬರಲಿಕ್ಕಿಲ್ಲವೇನು?

ಮಹಾ:—(ನಕ್ಕು) ಎಂಥ ಹುಚ್ಚಿಯು! ಇಷ್ಟು ಜನರು ನಮ್ಮ ಸಂಗಡ ಇರುತ್ತಿರಲಿಕ್ಕೆ ಬೇರೆ ಪರಿಜನರೇತಕ್ಕೆ?

ತರಲಿಕೆ:—ಯಾರಿರುವರು? (ಸುತ್ತಲೂನೋಡಿ) ನಾನೂ ನೀನೂ ಇಬ್ಬರೇ ಅಲ್ಲವೇನು?

ಮಹಾ:—ಇಗೋ ನೋಡು:—

||ಪದ|| ("ಸಜ್ಜುಕರುನಿ ಚಾಪವಮದನ" ಎಂಬಂತೆ)

ಸರಳ್ವಿಡಿದುಭರದಿಸ್ಮರನು ಬರುತಲಿರ್ಪನು ||ಪ||
ವರಿಸಲೆಂದು ತಮವಚಂದ್ರ ನೋಡುತಿರ್ಪನು ||ಅ. ಪ||
ಅನುಪಮಾನುರಾಗಮಿದು | ವನದೆಪಥವ ತೋರಿಸುಗುಂ ||
ಮನವುಸಂಶಯವನು ತೊರೆದು | ಬಿನದದಿಂದೆ ಧಾವಿವುದು ||
ಅನವರತಂಲವಲವಿಕೆಯು ಧೈರ್ಯಗುಡುವುದು ||೧||

ತರಲಿಕೆ:—(ನಕ್ಕು) ಅವ್ವಯ್ಯ! ಈ ಪರಿಜನರ ಹೆಸರನ್ನು ಹೊಸ ದಾಗಿ ಕೇಳಿದೆನು. ಒಳ್ಳೇದು ನಡೆ ಹಾಗಾದರೆ.

ಮಹಾ:—ಏನೇ ತರಲಿಕೆ! ನಾವು ಈ ಮಾರ್ಗದಿಂದ ಹೋಗುವ ದೇನೋ ನಿಜ. ಯಾರಾದರೂ ನೋಡಿದರೆ ಉಪಾಯವೇನು?

ತರಲಿಕೆ:—ಪೂಜ್ಯಳೇ, ಇಗೋ ಈ ಹಳದೀಬಣ್ಣದ ಶಾಲು ತಂದಿರುವೆನು. ಇದನ್ನು ಹೊದ್ದುಕೊಂಡರೆ ಯಾರೂ ಗುರುತು ಹಿಡಿ ಯುವದಿಲ್ಲ. (ಎಂದು ಹೊಚ್ಚುವಳು.)

ಮಹಾ:—ಸಖೀ ನೋಡಿದೆಯಾ? ಈ ಚಂದ್ರನ ಪಕ್ಷಪಾತವನ್ನು! ಗಂಡಗಂಡಸರೆಲ್ಲ ಒಂದೇ ಎಂಬದು ಸುಳ್ಳಲ್ಲ.

ತರಲಿಕೆ:—ಅದೇಕೆ?

ಮಹಾ:—ಈ ಚಂದ್ರನು ಆ ಮುನಿಕುಮಾರನ ಪಕ್ಷಹಿಡಿದು, ನನ್ನನ್ನೇ ಅವಳ ಒಳಿಗೆ ಒಯ್ಯುತ್ತಿರುವನು. ಅವನನ್ನೇ ಇಲ್ಲಿಗೆ ಯಾಕೆ ಒರಮಾಡಬಾರದು?

ತರಲಿಕೆ:—ಹಾಗೆ ಇರಲಿಕ್ಕಿಲ್ಲವೆಂಬದಾದರೂ ಯಾತಕ ನೋಲಿಂದ? ನಡೆ ಮುಂದಕ್ಕೆ.

ಮಹಾ:—(ತುಸು ನಡೆದು ಮಧ್ಯದಲ್ಲಿಯೇ ನಿಂತು ತನ್ನಲ್ಲಿ) ಹಾ! ಇದೇನು!

ತರಲಿಕೆ:—ಪೂಜ್ಯಳೇ ಇದೇನು? ಮಧ್ಯದಲ್ಲಿಯೇ ಯಾಕೆ ನಿಂತೆ?

ಮಹಾ:—ಸಖೀ ಯಾಕೋ ನನ್ನ ಬಲಗಣ್ಣು ಹಾರುತ್ತದಲ್ಲೆ! ಆ ಮುನಿಕುಮಾರನು ಯಾವಕಾರಣದಿಂದಾದರೂ ನನ್ನ ಮೇಲೆ ಸಿಟ್ಟಾಗಿ ಮನಸ್ಸು ತೆಗೆದಿರಬಹುದೇನು?

ತರಲಿಕೆ:—ಎಂಥ ಹುಚ್ಚಿಯು ನೀನು! ಬಡವನ ಮನೆಗೆ ಭಾಗ್ಯ ಲಕ್ಷ್ಮಿಯು ಬಂದರೆ ಅದನ್ನು ಅವನು ನಿರಾಕರಿಸುವನೆ? ಇಲ್ಲದ ವಿಕಲ್ಪ ವನ್ನೆಲ್ಲ ಮನಸ್ಸಿನಲ್ಲಿ ತರಬೇಡ, ಬೇಗ ನಡೆ ಹೋಗೋಣ.

ಮಹಾ:—ಭೋ! ದೇವಾ:—

||ಕಂದ|| ಪುರಹರಪರಿಪಾಲಿಸುನೀಂ |
ವರಮುನಿಸುಕುಮಾರನನ್ನು ವರಿಸಲ್ಪೋಪೆಂ ||
ನಿರುತಂ ಸ್ಮರಿಪೆಂ ನಿನ್ನಂ |
ಕರುಣಿಪುದೈ ವಿಘ್ನ ಬಾರದೋಲ್ ಪರಶಿವನೇ ||೧||

(ಹೋಗುವರು.)

# ದ್ವಿತೀಯಾಂಕಂ

## ಮೊದಲನೆಯ ಪ್ರವೇಶ.

(ಸ್ಥಳ:—ಅಚ್ಛೋದ ಸರೋವರದ ಹತ್ತರ ಇರತಕ್ಕ ಲತಾಮಂಟಪ)

ಪುಂಡರೀಕ:—(ಮಲಗಿ)||ಪದ|| ರಾಗ-ಮುಖಾರಿ ತಾಳ-ದೀಪಚಂದಿ

ಸುಮಶರನೇ ನಿನಗೆ ವಶನಾದೆಂ ||ಪ||

ಯುಮಿಯೊಳ್ ಶರಗಳ ನೆನ್ನೊಳ್ ಪೂಡಿದೆ ||
ಸುಮನದೆನೀಂ ಪೊರೆಯ್ಯ ||೧||

ಮನ್ಮಥನೇ ಸೈರಿಸು ಸೈರಿಸು. (ಎದ್ದು ಕುಳಿತು) ಹಾ! ಪ್ರಿಯೆಯು ಈ ವರೆಗೂ ಯಾಕೆ ಬಂದಿರಲಿಕ್ಕಿಲ್ಲ! ನಾನು ಬರೆದುಕೊಟ್ಟ ಪತ್ರವನ್ನು ಅವಳ ಸಖಿಯು ಅವಳಿಗೆ ಕೊಟ್ಟಿರಲಿಕ್ಕಿಲ್ಲವೇನು? ಛೀ ಛೀ! ಆ ಬಡಪ್ರಾಣಿಗೆ ನಾನಾದರೂ ಯಾಕೆ ದೋಷಕೊಡಬೇಕು? ನನ್ನ ಪ್ರಿಯೆಗೆ ಆ ಪತ್ರದ ಅಭಿಪ್ರಾಯವೇ ತಿಳಿದಿರಲಿಕ್ಕಿಲ್ಲ. (ಯೋಚಿಸಿ) ಆಕೆಯಾದರೂ ಅತಿ ಚತುರೆಯು; ಮೇಲಾಗಿ ಗಂಧರ್ವಕನ್ಯೆಯು, ಇಂಥವಳಿಗೆ ಅಭಿಪ್ರಾಯ ವರಿತಿಲ್ಲವೆಂಬ ಮಾತು ಎಲ್ಲಿಯದು? ನಾನು ತನ್ನ ಪ್ರೀತಿಗೆ ಸರಿಯಾದವನಲ್ಲ ವೆಂದು ತಿಳಿದು ಬಿಟ್ಟಿರಬಹುದು. [ಯೋಚಿಸಿ] ಒಳ್ಳೇದು, ಹೀಗಿದ್ದ ಪಕ್ಷದಲ್ಲಿ ಅವಳು ತನ್ನ ಮುಕ್ತಾಹಾರವನ್ನೇಕೆ ನನ್ನ ಕೈಯಲ್ಲಿ ಕೊಡು ತ್ತಿದ್ದಳು? ಎಂದಿಗೂ ಕೊಡುತ್ತಿದ್ದಿಲ್ಲ. ಅಂದಮೇಲೆ ಗುರುಜನಗಳೂ, ಸಖಿಯರೂ ಅವಳನ್ನು ಪ್ರತಿಬಂಧಿಸಿರಬಹುದೇನು? ಹಾ! ಪ್ರಿಯೆ:—

||ಪದ||ರಾಗ—ಬಿಹಾಗ, ತಾಳ—ರೂಪ. ("ಅಭಿನವ" ಎಂಬಂತೆ)

ತುಂಬಿಯು ನವಮುಕರಂದಕೆ ಬಾಯ್ಬಿಡುವಪೊಲ್ ||ಪ||
ಹಂಬಲಿಸುವೆಂ ನಾಂ ನಿನ್ನನು ನಂಬಿಕೊಂಡಿಹೆಂ ||ಅ. ಪ||
ಮನಸಿಜನ ಸುಮಶರಗಳಿಂ ಬಂಧಿತನಾಗಿಂದುನಾಂ ||
ವನಭಾಗದೊಳ್ ಸುಮಶಯನದೆ ಬಂದು ನಿಂದೆನು ||೧||

ಪ್ರಿಯೆ ಬಾ. ನಿನ್ನ ಮುದ್ದು ಮುಖವನ್ನು ತೋರಿ ನನ್ನ ಮನಸ್ಸಂತಾಪ ವನ್ನು ಶಾಂತಮಾಡು. ಮಿತ್ರಾ ಕಪಿಂಜಲಾ, ನೀನಾದರೂ ದರ್ಶನ ಕೊಡಬಾರದೆ? ಔಷಧ ತರುವೆನೆಂದು ಹೇಳಿ ಯಾವ ಕಡೆಗೆ ಹೋದೆ! (ಇಷ್ಟರಲ್ಲಿ ಗಿಡದೊಳಗಿನ ಪುಷ್ಪಗಳು ಕೆಳಗೆ ಬೀಳುವವು. ಆಗ ಮೇಲಕ್ಕೆ ನೋಡಿ) ಅಹಹ! ಇಂಥ ವೇಳೆಯಲ್ಲಿ ಈ ಪುಷ್ಪಗಳು ಸಹ ನನ್ನ ಮೇಲೆ ವೈರತ್ವವನ್ನು ಬೆಳಿಸುವವಲ್ಲ! ಹಾ! ದುರ್ದೈವವೆ ಇದೇನು ನನ್ನ ಅವಸ್ಥೆ

ಯನ್ನು ಮಾಡಿದೆ! ಕಾಮಸಂತಾಪವು ಕಡಿಮೆಯಾಗಬಹುದೆಂಬ ಕಲ್ಪನೆಯಿಂದ ಈ ಪುಷ್ಪಿತ ಲತಾಮಂಟಪದಲ್ಲಿ ಬಂದು ಕುಳಿತೆನು. ಇಷ್ಟಾದರೂ ನನ್ನ ಬೆನ್ನ ಬಿಡಲೊಲ್ಲೆ! ಸಂತಾಪವು ದಶಗುಣಿತವಾಯಿತು. ಶಾಂತಮೂರ್ತಿಯಾದ ಚಂದ್ರನೇ, ನೀನಾದರೂ ಉದಯಿಸಿ, ನಿನ್ನ ಅಮೃತರಶ್ಮಿಗಳಿಂದ ನನ್ನ ಮನಸ್ಸಂತಾಪವನ್ನು ಕಡಿಮೆ ಮಾಡಬಾರದೇ! (ನಿಟ್ಟುಸುರುಬಿಟ್ಟು) ಛೆ ಛೆ! ಈಗ ನನ್ನ ಬೆಂಬಲಕ್ಕೆ ಯಾರೂ ಬರಲೊಲ್ಲರು. ಪ್ರಿಯೆ ಮಹಾಶ್ವೇತೆ, ನಿನ್ನ ಹೊರತು ನನಗೆ ರಕ್ಷಕರಾರೂ ಇಲ್ಲ. ಎಲೆ ಸುಂದರೀ ಹಂಸಕನ್ನಿಕೆ, ನಿನ್ನ ಸಲುವಾಗಿ ನನ್ನ ಪ್ರಾಣಮಿತ್ರನಾದ ಕಪಿಂಜಲನನ್ನು ತೊರೆದು ಬಿಟ್ಟೆನು. ಗುರುಜನಗಳ ಬೀತಿಯಂತೂ ಹೇಳ ಹೆಸರಿಲ್ಲದೆ ಹೋಯಿತು. ನಿನ್ನ ಮೋಹನ ರೂಪವು ನನ್ನ ದೃಷ್ಟಿಗೆ ಬೀಳುತ್ತಲೆ ಕೈಲಾಸನಾಥನ ದರ್ಶನೇಚ್ಛೆಯು ಕುಂಠಿತವಾಯಿತು. ಇಷ್ಟೇ ಅಲ್ಲ, ಈ ವರೆಗೂ ಕೈಕೊಂಡಿದ್ದ ಗುರುನಿರ್ದಿಷ್ಟ ತಪಸ್ಸಿನ ಮಾರ್ಗವನ್ನು ಸಹ ತೊರೆದು, ನಿನ್ನ ಪ್ರಾಪ್ತ್ಯರ್ಥವಾಗಿ:—

||ಪದ||ರಾಗ—ಕೇದಾರಗೌಳ. ತಾಳ—ಆದಿ.('ಜರಿ ಕರೀನ' ಎಂಬಂತೆ)

ಪ್ರಿಯೆ ನಿಜದಿನಾಚರಿಸುವೆ ತಪವತರುಣಿ ||ಪ||
ದಯವನ್ನು ತೋರುನೀಂ ಕಮಲನಯನೆ ||ಅ. ಪ||
ಸ್ಮರತಾಪದಬಹು ಘರ್ಮದಜಲದಿಂ ಸ್ನಾನವ ಗೈದಿಹೆಂಕೋಮಲೆವಿಮಲೆ||
ಪರತರಪುಷ್ಪಿತಚಿತ್ರಾಸನವಂ ರಚಿಸಿ ಕುಳಿತು ರಮ್ಯವನದೆ ||೧||
ಚಂದನಭಸ್ಮಂಗಳನುಧರಿಸಿಮೋಹ್ ಮೃಣಾಲಸೂತ್ರವತಳೆದಿರುವೆನು ನಾಂ||
ಅಂದದಕದಳೀದಳವಸನವನು ಸ್ಕಂಧದೆಹೊದೆದಿಂದುನಿರುತಂ ||೨||
ಮುಕ್ತಾವಲಿಜಪಮಾಲೆಯುಪಿಡಿದುಧ್ಯಾನವಮಾಳ್ಪೆಂ ದೃಢಮನದಿಂ ನಾಂ||
ಯುಕ್ತಮನದೆಮದ್ವಾಂಛಯಪೂರಿಸು ಬಾರೆರಮಣಿಸರಸವಾಣಿ ||೩||

ಹೇ ನಿರ್ದಯೇ ಮಹಾಶ್ವೇತೆ, ನನ್ನ ಮನೋವ್ಯಥೆಯು ಮಿತಿಮೀರಿತು. ಇಷ್ಟಾದರೂ ನಿನಗೆ ಕರುಣಬಾರದೆ! ವ್ಯರ್ಥವಾಗಿ ತಡಮಾಡಬೇಡ ಬೇಗ

ಬಾ. ನಿನ್ನ ಅಧರಾಮೃತಪಾನವಮಾಡಿಸಿ........(ಬೆದರಿ) ಅರರೆ! ನಾನು ನನ್ನ ಪ್ರಾಣಪ್ರಿಯೆಯ ಧ್ಯಾನ ಮಾಡುತ್ತಿರುವಷ್ಟರಲ್ಲಿ ಯಾರೋ ನನ್ನ ಪ್ರಾಣವನ್ನು ಆಕರ್ಷಿಸಹತ್ತಿದರಲ್ಲ! (ಮೇಲಕ್ಕೆ ನೋಡಿ)ಹಾ! ಅಧಮಾ ದೋಷಾಕರಾ ಚಂದ್ರಾ! (ಎದ್ದು ಆವೇಶದಿಂದ)

||ಪದ|| ಝಂಪಾ

ಪ್ರಿಯೆಯಧ್ಯಾನಂಗೈವ ಸಮಯದಲ್ಲುದಿಸಿ ||ಪ||
ರಯದೆಕಿರಣಂಗಳಿಂ ಪೀಡಿಸುವೆ ಬಳಿಸಿ ||ಅ. ಪ ||
ಪಾಪಿಚಂದ್ರನೆ ಪ್ರಾಣವನು ಬರಿದೆಸೆಳೆದೆ |
ಶಾಪವೀವೆನು ನಿಜದಿನನುಭವಿಸು ನಿನಗೆ ||
ಈ ಪುರುಷಲೋಕದೊಳು ಕಾಮಸುಖವದು ಸಿಗದೆ |
ತಾಪವನ್ನನುಭವಿಸುತಸುದೊರೆಯೊಭರದೆ ||೧||

ಹಾ! ಪ್ರಿಯೆ ಮಹಾಶ್ವೇತೆ! ಮಿತ್ರಾ ಕಪಿಂಜಲಾ! ಅಯ್ಯೋ ಅಪ್ಪಾ! ಹಾ ತಂದೇ ಶ್ವೇತಕೇತೂ! ಭೋ ಮಾತೇ ಕಮಲನಿವಾಸಿನೀ ಲಕ್ಷ್ಮೀ! ನಿಮ್ಮೆಲ್ಲರನ್ನು ಬಿಟ್ಟು ಈ ಪುಂಡರೀಕನು ಪರಲೋಕಕ್ಕೆ ಹೋ........ (ಮೂರ್ಛಿತನಾಗಿ ಬೀಳುವನು)

ಚಂದ್ರ:—ಹಾ! ಮೂರ್ಖ ಮುನಿಕುಮಾರಾ, ತಪೋಬಲದಿಂದ ಗರ್ವಿಷ್ಠನಾಗಿ, ಅನಪರಾಧಿಯಾದ ನನಗೆ ನಿಷ್ಕಾರಣವಾಗಿ ಶಾಪ ಕೊಟ್ಟೆಯಾ! ಇಗೋ ತೆಗೆದುಕೊ, ನನ್ನ ಶಾಪದ ಮಹತ್ವವನ್ನಾದರೂ ನೋಡು, ನನ್ನಂತೆ ನೀನಾದರೂ ನನ್ನ ಸಂಗಡ ಸುಖದುಃಖವನ್ನನು ಭವಿಸು. ನಿಶ್ಚಯ ನಿಶ್ಚಯ! ಈ ಮಾತು ಎಂದಿಗೂ ಸುಳ್ಳಾಗಲಿಕ್ಕಿಲ್ಲ, ಮನಗಾಣು.

ಪುಂಡರೀಕ:—(ಕುಳಿತು) ಹಾ! ಕಠಿಣಹೃದಯೇ ಗಂಧರ್ವಕನ್ನಿಕೆಯೇ ಈ ಜನ್ಮದಲ್ಲಂತೂ ನಿನ್ನ ದರ್ಶನವು ಸಹ ದುರ್ಲಭವಾಯಿತು. ಮುಂದಿನ ಜನ್ಮದಲ್ಲಿಯಾದರೂ ನನ್ನನ್ನು ಸ್ವೀಕರಿಸು. (ಕೇಳಿ ಆನಂದ

ದಿಂದ) ಆ ಇದೇನು? ಹೆಜ್ಜೆಗಳ ಸಪ್ಪಳವು ಕೇಳಬರುವದು? ಹಾ! ಪ್ರಿಯೆಯು ಬಂದಳೆಂಬಂತೆ ತೋರುತ್ತದೆ. ನಿರುಪಾಯವು! ಈಗ ಬಂದರೂ ಮಾಡುವದೇನು! ಅಂತ್ಯಕಾಲವು ಸಮೀಪಿಸಿತು.

||ಸಾಕಿ||

ಪಾಷಾಣದತೆರವಾದದು ಶೀರ್ಷಂದೃಷ್ಟಿಗೆ ಕಾಣಿಸದಿಷ್ಟುಂ|
ವಿಷತಿಂದವನವೊಲಾದುದುನನಗೀದೇಹವು ಚಲಿಸದಿದೆಷ್ಟುಂ ||
ರಸನವುತಡೆದಿಂದು | ಉಸುರಲ್‌ಬಾರದುಬಾಪ್ರಿಯೆ.... ||೧||

[ಹೀಗೆ ಅನ್ನುತ್ತಲೇ ಬೀಳುವನು. ಅಷ್ಟರಲ್ಲಿ ಕಪಿಂಜಲನು ಬರುವನು.]

ಕಪಿಂಜಲ:—[ಅವನನ್ನು ಎತ್ತಿಹಿಡಿದು] ಮಿತ್ರಾ ಪುಂಡರೀಕಾ ಸ್ವಲ್ಪತಡೆ. ಇದೇ ಈಗ ಮಹಾಶ್ವೇತೆಯು ಬಂದು ನಿನ್ನ ಮನೋರಥ ವನ್ನು ಪೂರ್ಣಮಾಡುವಳು.

ಪುಂಡರೀಕ:—[ಕಣ್ಣುತೆರೆದು] ಎಲ್ಲಿರುವಳು ಮಹಾಶ್ವೇತೆಯು... [ಪ್ರಾಣ ಹೋಗುವದು.]

ಕಪಿಂಜಲ:—[ಹಣೆಹಣೆ ಬಡಕೊಳ್ಳುತ್ತ] ಹಾಯ್‌ ಹಾಯ್‌! ಸರ್ವಸ್ವವೂ ಘಾತವಾಯಿತು. ಮಿತ್ರನು ಮಡಿದನು. ಮಿತ್ರಾ ನನ್ನನ್ನು ಬಿಟ್ಟು ಹೇಗೆ ಹೋಗುತ್ತಿರುವಿ!

||ಪದ|| ರಾಗ—ತೋಡಿ ತೇಕಾ ಪಂಜಾಬಿ.

ಮಿತ್ರಾಹರಣವನೀಗಿದೆಯಾ ||ಪ|| ಮಿತ್ರವಿರಾಜಾವಿದ್ವದ್ರತ್ನಾ ||ಅ. ಪ||
ನೀನಿಲ್ಲದಿರಲೀದೀನನಗೆಭುವನವ || ಶೂನ್ಯವಿದಪ್ಪುದುನಿಜದೆ ||೧||

ಹಾಯ್‌ ಹಾಯ್‌! ಮಿತ್ರಾ ನಿನ್ನನ್ನು ಅಗಲಿ ಹ್ಯಾಗೆ ಜೀವಿಸಲಿ! (ದುಃಖಿಸುತ್ತ ಕೂಡ್ರುವನು.)

ಮಹಾಶ್ವೇತಾ:—(ಪಡದೆಯಲ್ಲಿ) ಸಖೀ ತರಲಿಕೆ, ಯಾಕೆ ಹಿಂದು ಳಿಯುವೆ? ಬೇಗ ಬಾ. ಅಗೋ ನೋಡು, ಅತ್ತಣಿಯಿಂದ ಆರ್ತಧ್ವನಿಯು ಕೇಳಬರುತ್ತದೆ

ಕಪಿಂಜಲ:—ಮಿತ್ರಾ ನಾನು ಇಷ್ಟೆಲ್ಲ ಕಷ್ಟಬಟ್ಟದ್ದು ನಿನ್ನ ಹಿತಾರ್ಥವಾಗಿಯೇ ಅಲ್ಲವೆ? ಮಹಾಶ್ವೇತೆಯ ಹಾರೈಕೆಯನ್ನೆಲ್ಲ ವ್ಯರ್ಥಮಾಡಿಬಿಟ್ಟೆಯಲ್ಲ! ನನ್ನ ತರ್ಕದಂತೆ ಒಂದುವೇಳೆ ಅವಳು ನಿನ್ನ ಮನೋರಥವನ್ನು ಪೂರ್ಣಮಾಡಲಿಕ್ಕೆ ಈ ಸ್ಥಳಕ್ಕೆ ಬಂದರೆ, ನಿನ್ನ ಈ ಅವಸ್ಥೆಯನ್ನು ನೋಡಿ ಅವಳ ಪರಿಣಾಮವೇನಾಗಬಹುದು? (ಕುತ್ತಿಗೆಗೆ ಕೈಹಾಕಿ) ಮಿತ್ರಾ ಸರ್ವಸ್ವವನ್ನೂ ಘಾತಿಸಿ ಹೊರಟು ಹೋದೆಯಾ!

ಮಹಾ:— (ಹೊರಗೆ ಬಂದು) ಅವ್ವಯ್ಯ! ಸಖೀ ಇದೇನೆ? ಕಪಿಂಜಲನ ರೋದನಧ್ವನಿಯೆಂಬಂತೆ ತಿಳಿಯುತ್ತದೆ.(ಗಟ್ಟಿಯಾಗಿ)ಯಾರಲ್ಲಿ ದುಃಖಿಸುತ್ತಿರುವರು?

ಕಪಿಂಜಲ:—(ಕೇಳಿ)ಶಿವ ಶಿವ! ಮಹಾಶ್ವೇತೆಯು ಒಂದಳು.

ಮಹಾ:—ಭಗವನ್ ನನ್ನ ಪ್ರಿಯಮುನಿಕುಮಾರನೆಲ್ಲಿರುವನು?

ಕಪಿಂಜಲ:—(ತಲೆಬೊಗ್ಗಿಸಿ) ಅವ್ವಾ ಏನು ಹೇಳಲಿ! ರೋಗಿಯ ಪ್ರಾಣಹೋದ ಒಳಿಕ ತ್ರೈಲೋಕ್ಯಚಿಂತಾಮಣಿಯು ಬಂದಂತೆ ನೀನು ಬಂದೆ! ಆ ದುಷ್ಟ ಮನ್ಮಥನು ಸರ್ವಸ್ವವನ್ನೂ ಘಾತಿಸಿದನು.

ಮಹಾ:—(ಪುಂಡರೀಕನ ಶವವನ್ನು ನೋಡಿ) ಹಾ! ಜೀವಿತೇಶ್ವರಾ ಮುನಿಕುಮಾರ, ಎಲ್ಲಿ ಹೋದೆ? (ಎನ್ನುತ್ತಲೇ ಶವದಮೇಲೆ ಬೀಳುವಳು.)

ತರಲಿಕೆ:—(ವಿಲಾಸಸಾಮಗ್ರಿಗಳನ್ನು ಚಲ್ಲಿಕೊಟ್ಟು ದುಃಖದಿಂದ) ಅಹಹ! ಏನು ಅನರ್ಥವಿದು! (ಗಾಳೀಹಾಕುವಳು.)

ಮಹಾ:—(ತುಸುಹೊತ್ತಿನಮೇಲೆ ದೊಡ್ಡ ಧ್ವನಿಯಿಂದ) ತರಲಿಕೇ ತರಲಿಕೆ, ಯಾರೋ ದುಃಖಿಸುತ್ತಿರುವರು ಬೇಗ ಬಾ. (ಸ್ವಲ್ಪ ಎಚ್ಚರಾಗಿ)ಅಹಹ! ನಾನು ಎಲ್ಲಿರುವೆನು! ಕತ್ತಲೆಮುಸುಕಿದ ಗವಿಯಲ್ಲಿರುವೆನೊ, ಆಳವಾದ ತಗ್ಗಿನಲ್ಲಿರುವೆನೊ? ಏನೂ ತಿಳಿಯಲೊಲ್ಲದು. ಇದೇನು ಕೈಗೆ ತಣ್ಣಗೆ ಹತ್ತುತ್ತದೆ? ಅವ್ವಯ್ಯ! ನನ್ನ ಪ್ರಿಯ ಮುನಿಕುಮಾರನ

ಶವದ ಮೇಲೆ ಬಿದ್ದಿರುವೆನು. ಈಗ ಯಾವತ್ತೂ ನೆನಪಿಗೆ ಬಂತು. ಹಾ! ದುಷ್ಟೇ ಮಹಾಶ್ವೇತೇ, ಇನ್ನೂ ಜೀವದಿಂದಿರುವೆಯಾ? ಜನ್ಮಾಂತರದಲ್ಲಿ ಮಾಡಿದ ಪಾಪಕೃತ್ಯದ ಫಲವನ್ನನುಭವಿಸಲಿಕ್ಕೆಂದು ಬದುಕಿದೆಯಾ? ಹಾ ಪ್ರಿಯಾ! —

||ಪದ||ರಾಗ-ಅಸಾವೇರಿ, ತಾಳ ಧುಮಾಳಿ "ಏಂ ಸಮಜುತರ" ಎಂಬಂತೆ

ನೀ ಹರಣವನುನೀಗಿದೆಯಾಪ್ರಿಯನೆ ||ಪ||
ದುರಿತೆಯೆನುತಲೀಪತಿಯನು ತೊರೆದು |
ತೆರಳಿದೆಯಾಸಲೆದುಃಖವನೀಡುತ ||ಅ. ಪ|| ನೀ—
ಕರುಣವತೋರು ನೀನೆನ್ನೊಳುರಮಣಾ |
ಹರನವನಿನ್ನೊಳ್ ಮುನಿದನೊ ಸುಗುಣಾ ||
ಮರೆಯುಲೆಂತುನಾಂ ಸುರುಚಿರವದನಾ |
ವರಮುನಿಕುವರಾ ಮಾರಸಮಾನನೆ! ||೧|| ನೀ—

(ಶವದ ಮೇಲೆ ಬಿದ್ದು ದುಃಖಿಸಹತ್ತುವಳು)

ತರಲಿಕೆ:—ಪ್ರಿಯಸಖೀ, "ಶೋಕಮಾಡಬೇಡ"ೆಂದು ನಾನಾದರೂ ಹೇಗೆ ಹೇಳಲಿ! ದುರ್ದೈವವೇ ಈಪರಿ ಘಾತಿಸಿದಮೇಲೆ ಯಾರೇನು ಮಾಡತಕ್ಕದ್ದದೆ? ಹ್ಯಾಗಾದರೂಮಾಡಿ ದುಃಖವನ್ನು ಶಾಂತಮಾಡಿಕೋ. ಭಗವನ್ ತಾವಾದರೂ ಇವಳಿಗೆರಡು ಮಾತುಗಳನ್ನು ಹೇಳಿರಿ.

ಕಪಿಂಜಲ:—(ಏನೂ ಮಾತಾಡದೆ ನಿಟ್ಟುಸುರುಬಿಟ್ಟು ಸುಮ್ಮನೆ ಕೂಡ್ರುವನು)

ಮಹಾ:—ಪ್ರಿಯಾ! ಅನಾಥೆಯನ್ನು ಮಾಡಿದೆಯಾ! ನಿನ್ನ ಪ್ರೇಮಪತ್ರಿಕೆಯನ್ನೋದುತ್ತಲೇ ನಾನು ಈ ಕಡೆಗೆ ಹೊರಟುಬರಲಿಲ್ಲವೆಂದು, ನನ್ನ ಮೇಲೆ ಕೋಪಗೊಂಡು ಹೋದೆಯಾ! (ಅವನಕಡೆಗೆ ನೋಡನೋಡುತ್ತ ಒಮ್ಮೆಲೇ) ಅಮ್ಮಯ್ಯ! ಸಖೀ ತರಲಿಕೆ, ಪ್ರಾಣವಿರುತ್ತದೆಯೇ ಇರುತ್ತದೆ. ಇಗೋ ನೋಡು, ಮಾತಾಡುವದಕ್ಕಾಗಿ ತುಟಿಗಳನ್ನು

ಹ್ಯಾಗೆ ಹೊಯ್ದಾಡಿಸುವನು. ಪ್ರಿಯನೇ ನನ್ನ ಗುರುತು ಸಿಗುವದೇನು?

ಛೆ ಛೆ! ನಿನಗೆ ಸುಮ್ಮನೆ ಏನೋ ಒಂದು ತರದ ಭಾಸವಾಗುತ್ತದೆ. ಹೀಗೆ ಎಷ್ಟೋ ತರುಣರ ಪ್ರಾಣಹರಣಮಾಡಿದ, ನಿರ್ದಯನಾದ ಮನ್ಮಥನ ಪ್ರಭಾವದಿಂದಲೇ ನಿನಗೆ ಈ ತರದ ಕಲ್ಪನೆಯಾಗಿದೆಯೇ ಹೊರತು, ಬೇರೆಯೇನೂ ಇಲ್ಲ.

ಮಹಾ:—ಭಗವನ್ ತಾವು ಹೇಳಿದ್ದು ನಿಜ ಭ್ರಮೆಯಮೂಲಕವಾಗಿ ನನ್ನಲ್ಲಿ ಈ ತರದ ಕಲ್ಪನೆಯುಂಟಾಗಿತ್ತು. ತರಲಿಕೇ, ಈಗ ಏನೂ ಆಶೆ ಉಳಿಯಲಿಲ್ಲ. ಪ್ರಾಣಪ್ರಿಯನನ್ನಗಲಿ ಜೀವದಿಂದ ಇರಲಾರೆನು. ಬೇಗನೆ ಚಿತೆಯನ್ನು ಸಿದ್ಧಗೊಳಿಸು. ಸಹಗಮನಮಾಡಿ, ನನ್ನ ಪ್ರೇಮದ ಸಾಫಲ್ಯಮಾಡಿಕೊಳ್ಳುವೆನು.

ತರಲಿಕೆ:—(ಎದ್ದು ಮೇಲಕ್ಕೆ ನೋಡಿ) ಹಾ! ಆಶ್ಚರ್ಯ ಆಶ್ಚರ್ಯ!

ಮಹಾ:—ಆಶ್ಚರ್ಯವೇನು?

ತರಲಿಕೆ:—ಅಗೋ ನೋಡು ಶುಭ್ರವಸ್ತ್ರವನ್ನು ಧರಿಸಿರುವ ಅತಿ ತೇಜಸ್ವಿಯಾದ ಯಾವನೊಬ್ಬ ಪುರುಷನು ಆಕಾಶ ಮಾರ್ಗವಾಗಿ ಕೆಳಗೆ ಬರುತ್ತಿರುವನು.

ಮಹಾಶ್ವೇತಾ-ಕಪಿಂಜಲ:—ಎಲ್ಲಿ! ಎಲ್ಲಿರುವನು? (ಬೆರಗಾಗಿ ಮೇಲಕ್ಕೆ ನೋಡುವರು.)

ತರಲಿಕಾ:—ಇಗೋ ಬಂದ ಬಂದ! ಸಮೀಪಕ್ಕೆ ಬಂದ! ಈ ಮಹಾಪುರುಷನು ಯಾರಾಗಿರಬಹುದು?

ಮಹಾ:—ಸಖೀ ತರಲಿಕೆ, ನನ್ನ ದುಃಖವನ್ನು ಕೇಳಿ ದಯ ಹುಟ್ಟಿ, ದೇವಲೋಕದ ಯಾವನಾದರೊಬ್ಬ ಸತ್ಪುರುಷನು ನನ್ನ ಪ್ರಿಯನಿಗೆ ಪ್ರಾಣದಾನ ಮಾಡುವದಕ್ಕಾಗಿ ಬಂದಿರಲಿಕ್ಕೆ ಬೇಕು. ಹಾಗಿದ್ದರಂತೂ ಒಳಿತಾಯಿತು. ಈಗ ಆ ಮಹಾಪುರುಷನನ್ನೇ ಪ್ರಾರ್ಥಿಸುವೆನು.

ಚಂದ್ರ:—(ಆಕಾಶಮಾರ್ಗದಿಂದ ಬಂದು ಶವದ ಹತ್ತರ ಸುಮ್ಮನೆ ನಿಲ್ಲುವನು.)

ಮಹಾಶ್ವೇತಾ:—ಮಹನ್ ತಾವು ಯಾರೇ ಇರಲಿ, ತಮಗೆ ಶರಣು ಬಂದಿರುವೆನು. ನಾನು ತಮ್ಮ ಧರ್ಮಕನ್ನಿಕೆಯೆಂದು ಭಾವಿಸಿ, ನನಗೆ ಮಂಗಳಸೂತ್ರವನ್ನು ದಾನಮಾಡಿರಿ.

ಚಂದ್ರ:—(ಏನೂ ಮಾತಾಡದೆ ಆ ಶವವನ್ನು ಎತ್ತಿಕೊಂಡು ಆಕಾಶಮಾರ್ಗದಿಂದ ಹಾರುತ್ತ ಹೋಗಿ ಮೇಲಿಂದಲೇ)ವತ್ಸೇ ಮಹಾ ಶ್ವೇತೆ, ಪ್ರಾಣತ್ಯಾಗಮಾತ್ರ ಮಾಡಬೇಡ. ಕೆಲವು ದಿವಸಗಳ ಮೇಲೆ ನಿನ್ನ ಪತಿಯು ನಿನಗೆ ದೊರಕುವನು.

ಕಪಿಂಜಲ:—(ಸಿಟ್ಟಿನಿಂದ) ಛಡ! ದುರಾತ್ಮಾ ಅಂತಕಾ, ನನ್ನ ಮಿತ್ರನನ್ನು ತೆಗೆದುಕೊಂಡು ಹೋಗುವೆಯಾ! ನಿಲ್ಲು ನಿಲ್ಲು ಎಲ್ಲಿ ಹೋಗು ತ್ತೀಯೋ ನೋಡುತ್ತೇನೆ. (ಅವನ ಹಿಂದೆಯೇ ಹೋಗುವನು ತರಲಿಕೆ ಮಹಾಶ್ವೇತೆಯರು ಬೆರಗಾಗಿ ಅವನ ಕಡೆಗೆ ನೋಡುತ್ತ ನಿಲ್ಲುವರು)

ಮಹಾ:—ಆಗೋ ನೋಡು ಅತಿದೂರ ತಾರಾಮಂಡಲದ ಹತ್ತರ ಹೋದರು. (ಮೇಲಕ್ಕೆ ನೋಡುತ್ತ ತುಸು ತಡೆದು) ಅಹಹ! ಈಗಂತೂ ತೀರಾ ಕಾಣಿಸದಂತಾದರು. ತರಲಿಕೇ ಇದೇನೆ? ಬಹು ಆಶ್ಚರ್ಯವಾಗಿ ತೋರುವದು? ನನಗಂತೂ ಏನೂ ತಿಳಿಯಲೊಲ್ಲದು. ದೈವಗತಿಯು ವಿಚಿತ್ರವಾದದ್ದು! ನೋಡಿದೆಯಾ, ನಾನೊಂದು ಬೇಡಿದರೆ ದೈವವೊಂದು ಮಾಡಿತು; ನಾನು ಆ ಮಹಾಪುರುಷನನ್ನು ಬೇಡಿದ್ದೇನು! ಅವನು ನನಗೆ ಕೊಟ್ಟ ಆಶ್ವಾಸನವೇನು! ಸುಖಸಂಬಂಧವಿರವಿದ್ದರಷ್ಟೇ ಹೋಯಿತು. ಸಹಗಮನವನ್ನಾದರೂ ಮಾಡೇನೆಂದರೆ, ನನ್ನ ದುರ್ದೈವಕ್ಕೆ ಅದಕ್ಕೂ ಸಹ ವಿಘ್ನ ಒರಬೇಕೆ!

ತರಲಿಕೆ:—ಸಖೀ ಅದು ಏನೇ ಇರಲಿ, ಆ ಸತ್ಪುರುಷನು ಬಹು ಪ್ರೇಮಪೂರ್ವಕವಾಗಿ ಆಶ್ವಾಸನ ಕೊಟ್ಟಿರುವನು. ಅಂದಮೇಲೆ ಅದು

ಎಂದಿಗೂ ಸುಳ್ಳಾಗಲಿಕ್ಕಿಲ್ಲ. ನಿನಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ, ಪ್ರಾಣತ್ಯಾಗದ ಮಾತು ಮಾತ್ರ ತೆಗೆಯಬೇಡ.

ಮಹಾ:—(ತನ್ನಲ್ಲಿ) ಇವಳು ಹೇಳುವದಾದರೂ ಸರಿಯಾದದ್ದೇ ಇರುತ್ತದೆ. ಆ ದಿವ್ಯಪುರುಷನ ಆಶ್ವಾಸನವು ಸತ್ಯವಾದರಂತೂ ಬಹಳೇ ಒಳಿತಾಯಿತು. ಇಲ್ಲವಿದ್ದರೆ ಇಂದು ಮಾಡತಕ್ಕ ಪ್ರಾಣತ್ಯಾಗವನ್ನು ಅಂದು ಮಾಡಿದರಾಯಿತು. (ಪ್ರಕಾಶವಾಗಿ) ಸಖೀ ಒಂದು ರೀತಿಯಿಂದ ವಿಚಾರಿಸಿದರೆ ನಿನ್ನ ಅಭಿಪ್ರಾಯವು ಸರಿಯಾಗಿ ತೋರುವದು.

ತರಲಿಕಾ:—ನಡೆ ಹಾಗಾದರೆ, ಮನೆಯ ಕಡೆಗೆ ಹೋಗುವಾ. ಮಾಡತಕ್ಕದ್ದೇನು? ಬಂದದ್ದನ್ನು ಅನುಭವಿಸಲಿಕ್ಕೆ ಬೇಕು.

ಮಹಾ:—ಮನೆಗೆ ಹೋಗುವದು ಮಾತ್ರ ನನ್ನಿಂದಾಗದು. ಪ್ರಾಣಪ್ರಿಯನ ಚಿಂತೆಯಿಂದ ದೇಹವನ್ನು ಕಷ್ಟಬಡಿಸುತ್ತ ಈ ಘೋರಾರಣ್ಯದಲ್ಲಿಯೇ ಕಾಲಕಳೆಯುವೆನು. ಪ್ರತಿನಿತ್ಯದ ಸ್ನಾನಪಾನಾದಿ ಕಾರ್ಯಗಳನ್ನು ಈ ಸರೋವರದಲ್ಲಿಯೇ ತೀರಿಸಿಕೊಳ್ಳುತ್ತ, ಸತ್ಯಶ್ರೀಪರಮಾತ್ಮನ ಧ್ಯಾನದಲ್ಲಿ ಮಗ್ನಳಾಗುವೆನು. ಮನೆಯಲ್ಲಿ ಎಳ್ಳಷ್ಟಾದರೂ ಸುಖವಾಗಲಿಕ್ಕಿಲ್ಲ.

ತರಲಿಕೆ:—ಪ್ರಿಯಸಖೀ, ಹೀಗೆ ಮಾಡಿದ್ದಾದರೆ ನಿನ್ನ ತಾಯಿತಂದೆಗಳಿಗೆ ಎಷ್ಟು ದುಃಖವಾಗಬೇಡ! ನೀನೇ ವಿಚಾರಿಸು. ಗಂಡುಮಕ್ಕಳಂತೂ ಇಲ್ಲವೇ ಇಲ್ಲ. ಹೆಣ್ಣುಮಗಳಾದರೂ ನೀನೊಬ್ಬಳೇ ಒಬ್ಬಳು. ನಿನ್ನ ಮೇಲೆ ಅವರ ಪ್ರೀತಿ ಬಹಳ. ಈ ಸ್ಥಿತಿಯಲ್ಲಿ ಅವರು ನಿನ್ನನ್ನು ಬಿಟ್ಟು ಹೇಗೆ ಸುಖದಿಂದ ಕಾಲಕಳೆಯಬೇಕು?

ಮಹಾ:—ಸಖೀ ತರಲಿಕೇ, ಈಗ ನನಗೆ ತಾಯಿ ಬೇಡ ತಂದೆ ಬೇಡ ಸೌಖ್ಯ ಬೇಡ ಸಂಪತ್ತು ಬೇಡ, ಏನೇನೂ ಬೇಡ. ನನ್ನ ಪ್ರಾಣಕಾಂತನ ಮರಣದಿಂದ ಸರ್ವಸ್ವವೂ ನನಗೆ ಶೂನ್ಯವಾಗಿ ತೋರುವದು. ಆದ್ದರಿಂದ ನೀನೇ ಮನೆಗೆ ಹೋಗು, ಹಾಗೂ ಈ ಯಾವತ್ತೂ ಸಂಗತಿ

ಯನ್ನು ತಂದೆತಾಯಿಗಳಿಗೆ ತಿಳಿಸು; ಮತ್ತು ನನ್ನ ಸಲುವಾಗಿ ದುಃಖಿಸಬೇಡವೆಂದು ಹೇಳು. (ಅವಳನ್ನು ಆಲಿಂಗಿಸಿ) ಪ್ರಿಯಸಖೀ, ನನ್ನಂತೆ ನಿನ್ನ ಮೇಲಾದರೂ ಅವರ ಪ್ರೀತಿ ಬಹಳ. ಕಾರಣ ನೀನು ಯಾವಾಗಲೂ ಅವರ ಬಳಿಯಲ್ಲಿಯೇ ಇದ್ದು, ನನ್ನ ವಿಯೋಗದಿಂದಾಗತಕ್ಕ ಅವರ ಮನದ ದುಃಖವನ್ನು ಮರೆಯಿಸು.

ತರಲಿಕೆ:—(ಕಣ್ಣೀರು ಸುರಿಸುತ್ತ)ಗೆಳತೀ ನಾನು ಚಿಕ್ಕಂದಿನಿಂದ ನಿನ್ನ ಸೇವೆಯಲ್ಲಿದ್ದು ಇಂಥ ಸ್ಥಿತಿಯಲ್ಲಿ ನಿನ್ನನ್ನು ಬಿಟ್ಟು ಹೇಗೆ ಹೋಗಲಿ! ಈ ಬಗೆಯ ಅನುಚಿತ ಕೆಲಸಮಾಡಿ, ಅಧೋಗತಿಗಿಳಿಯುವದು ಮಾತ್ರ ನನ್ನಿಂದಾಗದು. ಮನಃಪೂರ್ವಕವಾಗಿ ಹೇಳುತ್ತೇನೆ. ನಿನ್ನ ಸುಖವೇ ನನ್ನ ಸುಖವು, ನಿನ್ನ ದುಃಖವೇ ನನ್ನ ದುಖಃವು, ನಿನ್ನ ಮನೋನಿಶ್ಚಯವೇ ನನ್ನ ಮನೋನಿಶ್ಚಯವು. ನನ್ನ ಈ ಜಡದೇಹದಲ್ಲಿ ಪ್ರಾಣವಿರುವವರೆಗೆ, ನಿನ್ನನ್ನು ಬಿಟ್ಟುಮಾತ್ರ ಹೋಗುವವಳಲ್ಲ.

ಮಹಾ:—ಒಳ್ಳೇದು, ಸಖೀ ನಿನ್ನ ದೈವದಲ್ಲಿ ಕಷ್ಟಸೋಸುವದಿದ್ದರೆ ಅದನ್ನು ತಪ್ಪಿಸುವವರಾರು? ನಡೆ ಹಾಗಾದರೆ, ಈ ಅಚ್ಛೋದ ತೀರ್ಥದಲ್ಲಿ ಸ್ನಾನಮಾಡಿ, ಬೇಗಿನಲ್ಲಿ ನೋಡಿದ ಆ ಗುಹೆಯೊಳಗೆ ಹೋಗೋಣ.

(ಮುಕ್ತಾಹಾರ, ಅವಶಿಷ್ಟವಲ್ಕಲ, ಕಮಂಡಲು ಮೊದಲಾದವುಗಳನ್ನು ತಕ್ಕೊಳ್ಳುವಳು. ಇಬ್ಬರೂ ಹೋಗುವರು)—

---

## ಎರಡನೆಯ ಪ್ರವೇಶ.

(ಸ್ಥಳ:—ಚಂದ್ರಲೋಕ ಚಂದ್ರಕಾಂತಶಿಲಾಸನ)

ರೋಹಿಣಿ:—ಪುಂಡರೀಕನ ದೇಹವನ್ನು ತರಹೋದ ನನ್ನ ಪ್ರಾಣ

ಪ್ರಿಯನಾದ ಚಂದ್ರನು ಈವರೆಗೂ ಬರಲಿಲ್ಲವಲ್ಲ. (ಮುಂದೆ ನೋಡಿ) ಹಾ! ಬಂದನು.

ಚಂದ್ರ:—(ಪ್ರವೇಶಿಸಿ) ಪ್ರಿಯೆ ರೋಹಿಣಿ, ಇಗೋ ನಿನ್ನ ಇಚ್ಛೆಯಂತೆ ಪುಂಡರೀಕನ ದೇಹವನ್ನು ತಂದಿರುವೆನು. ಸದ್ಯಕ್ಕೆ ಒಂದು ಚಾದರವನ್ನು ತಂದು ಇದರ ಮೇಲೆ ಹಾಕು.

ರೋಹಿಣಿ:—ಒಳ್ಳೇದು (ಚಾದರವನ್ನು ಹಾಕಿ) ಮಹಾಶ್ವೇತೆಗೆ ಪ್ರಾಣತ್ಯಾಗಮಾಡಬಾರದಾಗಿ ತಿಳಿಸಿದರೋ ಇಲ್ಲವೋ?

ಚಂದ್ರ:—ಪ್ರಿಯೆ ಅವಳ ವಿಷಯವಾಗಿ ಚಿಂತಿಸಬೇಡ. ಅವಳಿಗೆ ಅಭಯವಚನವನ್ನಿತ್ತಿರುವೆನು.

ರೋಹಿಣಿ:—ಪ್ರಿಯನೇ ಇತ್ತನೋಡು, ಯಾರೋ ಒಳ್ಳೇ ಆವೇಶದಿಂದ ಬರುತ್ತಿರುವರು.

ಚಂದ್ರ:—ಹೌದು. ಅವನು ಇವನ ಮಿತ್ರನಾದ ಕಪಿಂಜಲನು. ನನ್ನ ಮೇಲೆ ಸಿಟ್ಟಿಗೆದ್ದು ಇತ್ತಕಡೆಗೆ ಬರುತ್ತಿರುವನು. ಬರಲಿ, ಅವನನ್ನು ಸಮಾಧಾನಗೊಳಿಸುವೆನು.

ಕಪಿಂಜಲ:—(ಪ್ರವೇಶಿಸಿ ತನ್ನಲ್ಲಿ) ಇಂಥ ಪ್ರಸಂಗದಲ್ಲಿ ಸಿಟ್ಟಿನಿಂದ ಮನಬಂದಂತೆ ಮಾತಾಡುವದರಲ್ಲೇನೂ ಅರ್ಥವಿಲ್ಲ. ಸಮಾಧಾನದಿಂದ ಇವನನ್ನು ವಿಚಾರಿಸುವೆನು. (ಪ್ರಕಾಶವಾಗಿ) ಮಹಾನುಭಾವನೇ ನೀನು ಯಾರು?

ಚಂದ್ರ:—ಮುನೀಶ್ವರನೇ ನಾನು ಚಂದ್ರನು.

ಕಪಿಂ:—ನನ್ನ ಮಿತ್ರನ ದೇಹವನ್ನು ಇಲ್ಲಿಯವರೆಗೆ ಯಾಕೆ ತಂದೆ?

ಚಂದ್ರ:—ಸುರಕ್ಷಿತವಾಗಿಡುವದಕ್ಕೆಂದು ತಂದೆನು.

ಕಪಿಂಜಲ:—ನಿನಗೆ ಅಷ್ಟೊಂದವಶ್ಯವೇನಿತ್ತು?

ಚಂದ್ರ:—ಮುನೀಶ್ವರನೇ ಇವನು ನನ್ನ ಜಾಮಾತನು. ಆದ್ದರಿಂದ ದಯಹುಟ್ಟಿ ಈ ಕಡೆಗೆ ತಂದೆನು.

ಕಪಿಂಜಲ:—ಏನು? ಹಾಗಾದರೆ ಮಹಾಶ್ವೇತೆಯು ನಿನ್ನ ಸುಪುತ್ರಿಯೇನು?

ಚಂದ್ರ:—ಅವಳು ಪ್ರತ್ಯಕ್ಷ ನನ್ನಿಂದ ಜನಿಸದಿದ್ದರೂ, ನನ್ನ ವಂಶದಲ್ಲಿ ಜನಿಸಿದವಳಾದ್ದರಿಂದ ಅವಳನ್ನು ಪ್ರೇಮಪೂರ್ವಕವಾಗಿ ನನ್ನ ಮಗಳೆಂದೇ ಭಾವಿಸುವೆನು. ಮಗಳ ಗಂಡನೆಂದ ಮೇಲೆ, ನಿನ್ನ ಈ ಮಿತ್ರನು ನನಗೆ ಜಾಮಾತನೆಂದು ಹೇಳಲು ಸಂದೇಹವೇನಿದೆ?

ಕಪಿಂಜಲ:—ಒಳ್ಳೇದು ಇವನು ಮರಣ ಹೊಂದಿದ ಸಂಗತಿಯು ನಿನಗೆ ಹೇಗೆ ಗೊತ್ತಾಯಿತು?

ಚಂದ್ರ:—ಕೇಳು, ನಾನು ನನ್ನ ನಿತ್ಯ ಕ್ರಮದಂತೆ ಉದಯವಾಗುತ್ತಿರಲು, ಆ ಸಮಯದಲ್ಲಿ ಮದನಬಾಣಗಳಿಂದ ಪೀಡಿತನಾದ ನಿನ್ನ ಈ ಮಿತ್ರನು ಮಹಾಶ್ವೇತೆಯ ಹೆಸರನ್ನು ತೆಗೆದುಕೊಂಡು ಪರಿಪರಿಯಿಂದ ಪ್ರಲಾಪಿಸುವದು ನನ್ನ ದೃಷ್ಟಿಗೆ ಬಿತ್ತು. ಆಗ ಇವನಾದರೂ ನನ್ನನ್ನು ನೋಡಿದನು. ಒರಒರುತ್ತ ವಿರಹತಾಪವು ಹೆಚ್ಚಾಗಿ ಇವನಿಗೆ ಅಂತ್ಯಕಾಲವು ಸಮೀಪಿಸಿತು. ಆ ಕಾಲದಲ್ಲಿ ನಾನೇ ತನ್ನ ಪ್ರಾಣಹರಣಕ್ಕೆ ಕಾರಣನಾದೆನೆಂಬ ಕಲ್ಪನೆಯಿಂದ ನಿಷ್ಕಾರಣವಾಗಿ ನನಗೆ ಶಾಪಕೊಟ್ಟನು. ಆ ಕೂಡಲೆ ನಿರಪರಾಧಿಯಾದ ನಾನು ಸಿಟ್ಟಿಗೆದ್ದು, "ನನ್ನಂತೆ ನೀನಾದರೂ ಸುಖ-ದುಃಖಗಳನ್ನು ಅನುಭವಿಸು" ಎಂದು ಇವನಿಗೆ ಶಾಪ ಕೊಟ್ಟೆನು; ಇಷ್ಟಾದ ಕೂಡಲೆ ಇವನ ಪ್ರಾಣವು ಹೋಯಿತು.

ಕಪಿಂಜಲ:—ಶಾಂತಮೂರ್ತಿಯೇ ಜಾಮಾತನೆಂಬದು ನಿನಗೆ ಗೊತ್ತಿದ್ದೂ ನೀನು ಈ ಪ್ರಕಾರ ಶಾಪ ಕೊಡಬಹುದೇ?

ಚಂದ್ರ:—ಕಪಿಂಜಲಾ, ಸಿಟ್ಟಿನ ಭರದಲ್ಲಿ ನನಗೆ ಯಾವದೂ ಗೊತ್ತಾಗಲಿಲ್ಲ. ಶಾಪ ಕೊಟ್ಟನಂತರ ಮನಸ್ಸಿಗೆ ಬಹು ದುಃಖವೆನಿಸಿತು. ಆದದ್ದರಿಂದಲೇ ಈ ಶರೀರವನ್ನು ಇತ್ತ ತೆಗೆದುಕೊಂಡು ಬಂದೆನು.

ಕಪಿಂಜಲ:—ಮಹಾನುಭಾವನೇ ಕೊಟ್ಟ ಶಾಪವನ್ನಂತೂ ತಿರು

ಗಿಸಲಿಕ್ಕೆ ಬರುವಂತಿಲ್ಲವಷ್ಟೇ? ಮುಂದೆ ಇದಕ್ಕೆ ಉಪಾಯವೇನು?

ಚಂದ್ರ:—ಕೇಳು, ಪರಸ್ಪರರ ಶಾಪದ ಮೇರೆಗೆ ನಾವಿಬ್ಬರೂ ಇನ್ನು ಎರಡು ಜನ್ಮಗಳನ್ನು ತಾಳಬೇಕಾಗುವದು. ಇರಲಿ, ಈ ವಿಷಯ ವಾಗಿ ಸ್ವಲ್ಪಾದರೂ ಚಿಂತಿಸಬೇಡ. ಸತ್ಯಶ್ರೀ ಪರಮೇಶ್ವರನ ಅನುಗ್ರಹ ಪಡೆದು ನಾವಿಬ್ಬರೂ ಭೂಲೋಕದಲ್ಲಿ ಒಂದೇಸ್ಥಳದಲ್ಲಿಯೇಅವತರಿಸುವೆವು.

ಕಪಿಂಜಲ:—ಯಾವ ಸ್ಥಳದಲ್ಲಿ?

ಚಂದ್ರ:—ಉಜ್ಜಯಿನೀಪುರದಲ್ಲಿ.

ಕಪಿಂಜಲ:—ಯಾರ ಉದರದಲ್ಲಿ?

ಚಂದ್ರ:—ನಾನು ತಾರಾಪೀಡ ಮಹಾರಾಜನ ಮಗನಾಗಿ ಜನಿಸಿ "ಚಂದ್ರಾಪೀಡನೆ"ಂಬ ಹೆಸರಿನಿಂದ ಪ್ರಸಿದ್ಧನಾಗುವೆನು ನಿನ್ನ ಮಿತ್ರ ನಾದ ಈ ಪುಂಡರೀಕನು ಶುಕನಾಸ ಮಂತ್ರಿಯ ಮಗನಾಗಿ ಜನಿಸಿ ವೈಶಂಪಾಯನನೆಂಬ ಹೆಸರಿನಿಂದ ಪ್ರಸಿದ್ಧನಾಗುವನು.

ಕಪಿಂಜಲ:—(ತನ್ನಲ್ಲಿ)ಆಗಲಿ, ಎಷ್ಟೋ ಸಮಾಧಾನವು. (ಪ್ರಕಾಶ ವಾಗಿ) ಮಹಾನುಭಾವನೇ ನೀವೀರ್ವರೂ ಜನ್ಮತಾಳಿದ ಸಂಗತಿಯು ನನಗೆ ತಿಳಿದಕೂಡಲೆ ಅಲ್ಲಿಯವರೆಗೆ ಬಂದು ನಿಮ್ಮ ದರ್ಶನ ತೆಗೆದುಕೊಳ್ಳುವೆನು.

ಚಂದ್ರ:--ಆಗಬಹುದು. ಆದರೆ ಆ ಕಾಲದಲ್ಲಿ ನಮ್ಮಿಬ್ಬರಿಗೂ ಪೂರ್ವ ಜನ್ಮದ ಸ್ಮರಣೆಯಿರಲಾರದೆಂಬ ಸಂಗತಿಯನ್ನು ಮಾತ್ರ ಮರೆಯದಿರು.

ಕಪಿಂಜಲ:—ಆಗಲಿ, ಆ ಕಾಲಕ್ಕೆ ನಾನು ಪೂರ್ವಜನ್ಮದ ಸಕಲ ವೃತ್ತಾಂತವನ್ನು ನಿಮಗೆ ತಿಳಿಸುವೆನು.

ಚಂದ್ರ:—ಒಳ್ಳೇದು.

ಕಪಿಂಜಲ:—ಒಳ್ಳೇದು, ಹಾಗಾದರೆ ನಾನು ಈ ಸಂಗತಿಯನ್ನು ಮಹಾಶ್ವೇತೆಗೆ ತಿಳಿಸುವದಕ್ಕಾಗಿ ಹೊರಡುವೆನು.

ಚಂದ್ರ:—ಹೌದು ಬೇಗ ಹೊರಡು. ನಾನಾದರೂ ಇದೇ ಮಾತನ್ನೇ ಹೇಳುವವನಿದ್ದೆನು.

ಕಪಿಂಜಲ:—ಶಾಂತಮೂರ್ತಿಯೇ, ಕೃಪೆಯಿರಲಿ (ಹೊರಟು ಹೋಗುವನು)

ಚಂದ್ರ:—ಪ್ರಿಯೆ ರೋಹಿಣಿ, ಭೂಲೋಕದಲ್ಲಿ ನೀನು ನನ್ನ ನಂಬಿಗೆಯ ದಾಸಿಯಾಗಿ ಅವತರಿಸಲು ಸಮ್ಮತಿಸುವಿಯಷ್ಟೆ?

ರೋಹಿಣಿ:—ಪ್ರಿಯನೆ, ಭೂಲೋಕದಲ್ಲಿ "ಪತ್ರಲೇಖೆಯೆ"ಂಬ ಹೆಸರಿನಿಂದ ಪ್ರಸಿದ್ಧವಾಗಲು ಈ ಮೊದಲೇ ಅನುಮತಿಸಿರುವೆನಲ್ಲವೆ?

ಚಂದ್ರ:—ನಡೆ ಹಾಗಾದರೆ ಮಹೇಶ್ವರನ ಅನುಗ್ರಹಪಡೆದು ಪುಂಡರೀಕನೊಡನೆ ಉಜ್ಜಯಿನೀಪುರಕ್ಕೆ ತೆರಳುವಾ. (ಇಬ್ಬರೂಹೋಗುವರು)

---

# ತೃತೀಯಾಂಕಂ

## ಮೊದಲನೆಯ ಪ್ರವೇಶ.

—:(-o-):—

ಸ್ಥಳ:—ಅರಮನೆಗೆ ಹೋಗುವ ಮಾರ್ಗ.

(ಅರಮನೆಯಿಂದ ಬರತಕ್ಕ ಒಬ್ಬ ಬ್ರಾಹ್ಮಣನಿಗೆ ಒಬ್ಬ ಗಾಯಕನು ಭೆಟ್ಟಿಯಾಗುವನು.)

ಗಾಯಕ:—ನಮಸ್ಕಾರ ಸ್ವಾಮಿ ನಮಸ್ಕಾರ.

ಬ್ರಾಹ್ಮಣ:—ನಮಸ್ಕಾರ ನಮಸ್ಕಾರ, ವೃದ್ಧಾಪ್ಯಕಾಲ, ತಾವು ಯಾರೆಂಬದು ಗೊತ್ತಾಗಲೊಲ್ಲದು.

ಗಾಯಕ:—ಸ್ವಾಮಿ ನಾನು ದಕ್ಷಿಣದೇಶದ ಓರ್ವ ಗಾಯಕನು, ನಾನು ತಮಗೆ ಅಪರಿಚಿತನೇ ಇರುವೆನು; ಅಂದಮೇಲೆ ತಮಗೆ ಹೇಗೆ ಗುರುತು ಹತ್ತಬೇಕು? ಇರಲಿ, ಅರಮನೆಯ ಮಾರ್ಗವಾವುದು ಸ್ವಾಮಿ?

ಬ್ರಾಹ್ಮಣ:—ಹಿ!ಹಿ! ಮಹಾರಾಜರಿಂದ ಬಹುಮಾನಪಡೆಯ ಬೇಕೆಂಬ ಇಚ್ಛೆಯಿಂದ ಬಂದಿರುವಿರೇನು?

ಗಾಯಕ:—ಹೌದು ಸ್ವಾಮಿ.

ಬ್ರಾಹ್ಮಣ:—ಒಳ್ಳೇದು ಹಾಗಾದರೆ (ತೋರಿಸಿ) ಇದೇ ಮಾರ್ಗ ವಾಗಿ ಹೋಗಿರಿ. ನಾನಾದರೂ ಈಗ ಅರಮನೆಯಿಂದಲೇ ಬಂದೆನು. ರಾಜಮಂತ್ರಿಗಳೀರ್ವರು ಪುತ್ರೋತ್ಸವದ ಮೂಲಕ ಒಳ್ಳೇ ಆನಂದದಲ್ಲಿ ರುವರು. ಈ ಕಾಲದಲ್ಲಿ ತಾವು ಹೋದರೆ, ತಮಗೆ ಚನ್ನಾಗಿ ಬಹುಮಾನ ದೊರೆಯುಬಹುದು.

ಗಾಯಕ:—ಏನು ಸ್ವಾಮಿ, ಈ ವರೆಗೂ ನಿಮ್ಮ ಮಹಾರಾಜ ರಿಗೂ ಮಂತ್ರಿಯವರಿಗೂ ಗಂಡುಮಕ್ಕಳೇ ಆಗಿದ್ದಿಲ್ಲವೇನು?

ಬ್ರಾಹ್ಮಣ:—ಗಂಡುಮಕ್ಕಳೇಕೆ, ಹೆಣ್ಣುಮಕ್ಕಳು ಸಹ ಅಗಿದ್ದಿಲ್ಲ. ಆ ಸುಯೋಗವು ಈಗ ಒದಗಿ ಬಂದಿತು. ರಾಜಪುತ್ರನಿಗೆ ಚಂದ್ರಾಪೀಡ ನೆಂದೂ, ಮಂತ್ರಿಯ ಪುತ್ರನಿಗೆ ವೈಶಂಪಾಯನನೆಂದೂ ಹೆಸರಿಟ್ಟಿರುವರು.

ಗಾಯಕ:—ಒಳ್ಳೇದು, ಹಾಗಾದರೆ ಹೋಗಿಬರುವೆನು.

ಬ್ರಾಹ್ಮಣ:—ಒಳ್ಳೇದು, ನಡೆಯಿರಿ ಹಾಗದರೆ, ನನಗೂ ಹೊತ್ತಾ ಗುತ್ತದೆ. (ಪರಸ್ಪರರು ನಮಸ್ಕರಿಸಿ ಹೊರಟು ಹೋಗುವರು)

(ಮಾರ್ಗದಲ್ಲಿ ಇಬ್ಬರು ಬ್ರಾಹ್ಮಣರು ಪ್ರವೇಶಿಸುವರು)

೧ನೆಯ ಬ್ರಾಹ್ಮಣ:—ನಮಸ್ಕಾರ ಸ್ವಾಮಿ ನಮಸ್ಕಾರ.

೨ನೆಯ ಬ್ರಾಹ್ಮಣ:—ಓಹೋಹೋ! ಇದೇನು ಇಷ್ಟು ದಿವಸ ಕಾಣಿಸಲೇ ಇಲ್ಲ!

೧ನೆಯವ:—ಹೌದು ಸ್ವಾಮಿ, ಇಷ್ಟುದಿವಸ ಊರಲ್ಲಿದ್ದಿದ್ದಿಲ್ಲ, ತೀರ್ಥಯಾತ್ರೆಗಾಗಿ ಹೋಗಿದ್ದೆನು. ಮತ್ತೇನು? ಅರಮನೆಯ ಸಮಾಚಾರ!

೨ನೆಯವ:—ಕೇಳುವದೇನು ಸ್ವಾಮಿ! ನಾಳಿನ ದಿವಸ ಅರಮನೆ ಯಲ್ಲಿ ಭೋಜನಸಮಾರಂಭವಿರುವದು! ಭೋಜನಸಮಾರಂಭ!!

೧ನೆಯವ:—ಅದೇಕೆ?

೨ನೆಯವ:—ನಾಳಿನ ದಿವಸವೇ ಯುವರಾಜ ಚಂದ್ರಾಪೀಡನ

ಪಟ್ಟಾಭಿಷೇಕಮಹೋತ್ಸವವು ಜರಗತಕ್ಕದ್ದಿರುವದು.

೧ನೆಯುವ:—ಹಾಗಾದರೆ ಆಮಂತ್ರಣ ಬರಬಹುದು!

೨ನೆಯುವ:—ಓಹೋ! ನಿಶ್ಚಯವಾಗಿ ಬರುವದು.

೧ನೆಯುವ:—ಅಕೋ ಮರೆತಿದ್ದೆನು; ಅರಮನೆಯಲ್ಲಿ ಅತಿ ಸುಂದರವಾದ ಒಂದು ಕುದುರೆಯಿರುವದೆಂದು ಕೇಳಿರುವೆನಲ್ಲ? ನಿಜವೇನು?

೨ನೆಯುವ:—ಹೌದು ಹೊಸದಾಗಿ ಬಂದಿರುವದು; ಹಾಗೂ ಒಳ್ಳೇ ಗಂಭೀರಮುದ್ರೆಯುಳ್ಳದ್ದಾಗಿರುವದು; ಅದಕ್ಕೆ ಇಂದ್ರಾಯುಧವೆಂದು ಹೆಸರಿಟ್ಟಿರುವರು; ಯಾಕೆ? ನೋಡಲಿಚ್ಛೆಯಾಗಿರುವದೇನು?

೧ನೆಯುವ:—ಹೌದು ಸ್ವಾಮಿ.

೨ನೆಯುವ:—ನಡೆಯಿರಿಹಾಗಾದರೆ ಹೋಗೋಣ.(ಹೋಗುವರು)

## ಎರಡನೆಯ ಪ್ರವೇಶ.

—(-೩೦೩-)—

ಸ್ಥಳ:—ರಾಜಸಭೆಯು.

(ಬ್ರಾಹ್ಮಣರ ಸಮೂಹ, ತಾರಾಪೀಡ, ಶುಕನಾಸಪ್ರಧಾನ, ಮಾಂಡಲಿಕ ಅರಸರು, ವೈಶಂಪಾಯನ ಮೊದಲಾದವರು ಚಂದ್ರಾಪೀಡನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ)

||ಪದ|| ರಾಗ—ಜಿಲ್ಲಾ, ತಾಳ-ಆದಿ.

ಉಮಾಧವ ಶಂಕರಾ ಕಾಲಾರಿಯೇ ಹರಾ ಪರಾತ್ಮರಾ ||ಪ||<br>
ಕಾಮಾರಿಯೇ ಮಹೇಶ್ವರಾ ದಿಗಂಬರಾ ||ಅ ಪ||<br>
ದೀನಪಾಲ ಫಾಲನೇತ್ರ ಗಾನಲೋಲ ಶಂಭುವೆ |<br>
ವಿಜಯವನೀಯ್ಯೊ ನೀಂ ಸತತಂ |<br>
ಬಾಲಚಂದ್ರಾಪೀಡನಂ ಪೊರೆ ಕೃಪಾಳುವೆ ||೧||

ಬ್ರಾಹ್ಮಣರು:—ಮಹಾರಾಜರೇ, ತಮ್ಮ ಇಚ್ಛೆಯು ಪರಿಪೂರ್ಣವಾಯಿತಲ್ಲವೆ?

ತಾರಾಪೀಡ:—ಮಹಾತ್ಮರೆ, ಮಹೇಶ್ವರನ ದಯೆಯಿಂದಲೂ ತಮ್ಮೆಲ್ಲರ ಆಶೀರ್ವಾದಬಲದಿಂದಲೂ ಸರ್ವ ಇಚ್ಛೆಯೂ ಪರಿಪೂರ್ಣವಾಯಿತು.

(ಎಲ್ಲರೂ ಕೂಡ್ರುವರು; ನರ್ತಕಿಯರು ನರ್ತಿಸಿದಬಳಿಕ, ಅವರಿಗೆ ಬಹುಮಾನ ಕೊಡಲ್ಪಡುವದು ಹಾಗೂ ಯಾಚಕರಿಗೆ ದಾನಮಾಡಲ್ಪಡುವದು )

ಪುರೋಹಿತ:—ಮಹಾರಾಜನೆ, ದೇವರ ದರ್ಶನಕ್ಕೆ ತಡವಾಗುತ್ತದೆ; ದಯಮಾಡಿ ಹೊರಡಬೇಕು.

ತಾರಾಪೀಡ:—ಒಳ್ಳೇದು.(ಇಷ್ಟು ಅನ್ನುತ್ತಲೇ ಪಡದೆ ಬೀಳುವದು)

---

## ಮೂರನೆಯ ಪ್ರವೇಶ.

—(-೩೦೩-)—

ಸ್ಥಳ:—ಕೈಲಾಸಪರ್ವತದ ತಟದಲ್ಲಿರುವ ಸುವರ್ಣಪುರ.

(ಚಂದ್ರಾಪೀಡ ವೈಶಂಪಾಯನರು ಮಾತಾಡುತ್ತ ಕುಳಿತಿರುವರು)

ವೈಶಂಪಾಯನ:—ಮಿತ್ರಾ ಸಕಲ ರಾಜ್ಯಗಳನ್ನೂ ಜಯಿಸಿದಂತಾಯಿತು. ಇನ್ನು ನಾಲ್ಕುದಿವಸ ಇಲ್ಲಿಯೇ ಇದ್ದು, ವಿಶ್ರಾಂತಿ ತೆಗೆದುಕೊಂಡು, ತರುವಾಯ ನಮ್ಮ ಪಟ್ಟಣಕ್ಕೆ ತೆರಳುವಾ.

ಚಂದ್ರಾಪೀಡ:—ಮಿತ್ರಾ ವೈಶಂಪಾಯನಾ ನಿನ್ನ ಇಚ್ಛೆ ಇದ್ದಂತಾಗಲಿ, ಈಗ ನಾನು ಬೇಟೆಯಸಲುವಾಗಿ ಹೊರಡುವೆನು; ನಾನು ಬರುವವರೆಗೂ ಸೇನೆಯವ್ಯವಸ್ಥೆಯನ್ನು ಸರಿಯಾಗಿ ಇಟ್ಟಿರು.

ವೈಶಂ:—ಒಳ್ಳೇದು ಹಾಗೆ ಆಗಲಿ (ಇಬ್ಬರೂಹೋಗುವರು.)

---

## ನಾಲ್ಕನೆಯ ಪ್ರವೇಶ.

—(-೩೦೩-)—

ಸ್ಥಳ:—ಚಿತ್ರರಥವನ.

(ಮು ಕಿನ್ನರದಂಪತಿಗಳು ಓಡಹತ್ತಿರುವವು; ಅವುಗಳ ಬೆನ್ನುಹತ್ತಿ

ಅಶ್ವಾರೂಢನಾದ ಚಂದ್ರಾಪೀಡನು ಅತಿವೇಗದಿಂದ ಬರುವನು.)

ಚಂದ್ರಾಪೀಡ:—ಇಗೋ ಈಗ ಸಿಗುತ್ತವೆ; ಇಗೋ ಹಿಡಿದೆನು. (ಕಿನ್ನರಮಿಥುನಗಳು ಕಾಣದಂತಾಗಲು) ಅಹಹ! ಏನಾಶ್ಚರ್ಯವಿದು? ಈ ಕಿನ್ನರಮಿಥುನಗಳು ಒಮ್ಮೆಲೇ ಕಾಣದಂತಾಗಿ ಹೋದವಲ್ಲ? ಛೀ ಛೀ ನನ್ನ ಪ್ರಯತ್ನವೆಲ್ಲ ನಿಷ್ಫಲವಾಯಿತು. ಆಗಲಿ, ಈಗ ಅವುಗಳನ್ನು ಹುಡುಕುವದರಲ್ಲೇನೂ ಅರ್ಥವಿಲ್ಲ. ಬಿಸಿಲೇರಿ ನೆಲವು ಕಾಯ್ದಿರುವದು; ನೀರಡಿಕೆಯಾಗಿರುವದು; ಆದ್ದರಿಂದ ಮೊದಲು ಜಲಾಶಯುವನ್ನು ಹುಡುಕುವೆನು. (ಎಂದು ಹೋಗುವನು)

---

## ಐದನೆಯ ಪ್ರವೇಶ.

—8(-0-)8—

ಸ್ಥಳ:—ಚಿತ್ರರಥವನದೊಳಗಿನ ಅಚ್ಛೋದಸರೋವರ.

ಚಂದ್ರಾಪೀಡ:—||ಪದ|| ರಾಗ-ಕಲ್ಯಾಣಿ, ತಾಳ-ಆದಿ.

ರಮಣೀಯುವಾಗಿ ತೋರುವದೀವನಂ ||ಪ||
ಸುಮಪೂರಿತ ವೃಕ್ಷಗಳಿಂದೆ ||ಅ. ಪ.||
ಬಾಳೆಚಂಪಕಚೂತಾದಿತರುಗಳ ||
ಥಳಥಳಿಸುವ ತಳಿಮಿಂಚಿನಿಂದಿರದೆ ||೧||
ವಿಲಸಿತಸರದಿಂ ಕಲಹಂಸಗಳಿಂ ||
ನಳನಳಿಸುವ ಫಲವೃಕ್ಷಗಳಿಂದೆ ||೨||

ಅಶ್ವಮುಖಿಗಳಾದ ಕಿನ್ನರಮಿಥುನಗಳನ್ನು ಬೆನ್ನಟ್ಟಿ ದಣಿದು ಬಹಳ ನೀರಡಿಸಿರುವೆನು; ಆದ್ದರಿಂದ ಈ ಸರೋವರದಲ್ಲಿ ಸ್ವಲ್ಪ ಜಲಪಾನಮಾಡಿ, ಆ ಮೇಲೆ ಈ ವಸಂತಲತೆಯ ಕೆಳಗೆ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳುವೆನು. ಅಂದರೆ ಇದರಿಂದ ಬಿಸಿಲಿನ ತಾಪವಾದರೂ ಕಮ್ಮಿಯಾಗುವದು; ಹಿಂದಿನಿಂದ ಸುವರ್ಣಪುರದ ಮಾರ್ಗವನ್ನು ಹಿಡಿದು ಹತ್ತು

ಕೆಲಸದಲ್ಲಿ ತೊಡಗಿದರಾಯಿತು. (ನೀರು ಕುಡಿದು) ಆಹಹ! ಈ ಸರೋವರವೆಂದರೆ ರಮಣೀಯವಸ್ತುವಿನ ಶಿರೋರತ್ನವೇ ಸರಿ; ಇದರೊಳಗಿನ ನೀರಾದರೂ ಎಷ್ಟು ವಿಮಲ! (ಇಷ್ಟರಲ್ಲಿ ಸ್ವಲ್ಪ ಗೀತಧ್ವನಿಯನ್ನು ಕೇಳಿ) ಓಹೋ! ಮನುಷ್ಯಸಂಚಾರವಿಲ್ಲದ ಈ ಅರಣ್ಯದಲ್ಲಿ ವೀಣಾನಾದಯುಕ್ತವಾದ ಈ ಮಧುರ ಗೀತಧ್ವನಿಯು ಯಾರದಿರಬಹುದು; ಆಹಹ! ಎಷ್ಟು ಇಂಪಾಗಿ ಕೇಳಬರುವದು! ಆದ್ದರಿಂದಲೇ ನನ್ನ ಈ ಕುದುರೆಯು ಗೀತಧ್ವನಿಗೆ ಮೋಹಿಸಿ ಅತ್ತ ಕಡೆಗೆ ಹೋಗಹತ್ತಿದಂತೆ ಕಾಣುತ್ತದೆ. ಆಗಲಿ ಈ ಧ್ವನಿಯು ಎಲ್ಲಿಂದ ಬರುತ್ತಿರುವದೆಂಬದನ್ನು ಇನ್ನೊಂದುಸಾರೆ ಪರೀಕ್ಷಿಸುವೆನು. (ಸ್ವಲ್ಪ ಮುಂದೆ ಬಂದು ಕಿವಿಗೊಟ್ಟು ಕೇಳಿ) ನಿಶ್ಚಯ! ಸಮೀಪದಲ್ಲಿರುವ ಈ ದೇವಾಲಯದೊಳಗಿಂದಲೇ ಈ ಗೀತಧ್ವನಿಯು ಬರುತ್ತಿರಲಿಕ್ಕೆಬೇಕು. ಒಳ್ಳೇದು ಸಮೀಪಕ್ಕೆ ಹೋಗಿ ನೋಡುವೆನು. (ಹೋಗುವನು)

ಮಹಾಶ್ವೇತಾ:—॥ಪದ॥ ("ಅಜುನಿ ಮಜವರಿ" ಎಂಬಂತೆ)

ಗಿರಿಜಾರಮಣಾ ಸಾಂಬಶಂಕರ ಕಾಮಹರನೇ ವಂದಿಪೆಂ ॥
ಸುರಮುನಿನರವರವಂದಿತಚರಣಾ ಶ್ಯಾಮಕಂಠನೆ ಶೇವಿಪೆಂ ॥೧॥

(ಪುನಃ ಧ್ಯಾನಮಾಡಹತ್ತುವಳು)

ಚಂದ್ರಾಪೀಡ:—(ಸಾವಕಾಶವಾಗಿ ಮುಂದಕ್ಕೆ ಹೋಗಿ ಅವಳ ಕಡೆಗೆ ನೋಡುತ್ತ) ಆಹಹ! ಇವಳ ಆಕೃತಿಯು ಮೇಲಿಂದಲೂ ಮಧುರವಾದ ಗೀತಧ್ವನಿಯಮೇಲಿಂದಲೂ ವಿಚಾರಮಾಡಿದರೆ ಗಂಧರ್ವಕನ್ನಿಕೆಯೆಂಬಂತೆ ತಿಳಿಯುತ್ತದೆ.

॥ಪದ॥ ರಾಗ-ಮಧ್ಯಮಾವತಿ, ತಾಳ-ಆದಿ.

ನೋಡಿ ಪರಮ ಸುಖಿಯಾದೆನೀಕೆಯ ॥ಪ॥
ಅನುಪಮ ಶೋಭಿತ ಮುಖಮುದ್ರೆಯುತಾಂ ॥
ಮನಕಾನಂದವ ನೀಯುವ ॥೧॥ ದೀಕೆಯ—

ಅಹಹ! ತಪಃಪ್ರಭಾವದಿಂದ ಗಂಭೀರವಾದ ಇವಳ ಪುಣ್ಯಕಾರಕ ದೃಷ್ಟಿಯು ನನ್ನ ಮೇಲೆ ಬೀಳುತ್ತಲೇ, ನಾನು ಪವಿತ್ರತೀರ್ಥದಿಂದ ಸ್ನಾನಮಾಡಿದಂತಾಯಿತು.

ಮಹಾ:—ಭಗವನ್, ಬರಬೇಕು ನಿನಗೆ ಸ್ವಾಗತವಿರಲಿ.

ಚಂದ್ರಾಪೀಡ:—(ಹತ್ತಿರಹೋಗಿ) ದೇವೀ ನಮಸ್ಕರಿಸುತ್ತೇನೆ.

ಮಹಾ:—ಬಾ ಕುಳಿತುಕೋ. ನೀನು ಯಾರು? ಮನುಷ್ಯ ಸಂಚಾರವಿಲ್ಲದ ಈ ಅರಣ್ಯದಲ್ಲಿ ಹೇಗೆ ಬಂದೆ?

ಚಂದ್ರಾ:—ಭಗವತೀ ನಾನು ಉಜ್ಜಯಿನಿಯ ಅರಸನಾದ ತಾರಾ ಪೀಡನ ಮಗನು; ನನ್ನ ಹೆಸರು ಚಂದ್ರಾಪೀಡ; ನನಗೆ ಯುವರಾಜ ಪಟ್ಟಾಭಿಷೇಕವಾದನಂತರ ಸಕಲ ರಾಜ್ಯಗಳನ್ನು ಜಯಿಸಿ, ಹಿಮಾಚಲ ತಟದಲ್ಲಿರುವ ಸುವರ್ಣಪುರವೆಂಬ ಕಿರಾತನಗರದಲ್ಲಿ ವಿಶ್ರಾಂತಿಗೋಸ್ಕರ ಸೇನಾಸಮೇತನಾಗಿ ವಾಸಮಾಡಿಕೊಂಡಿದ್ದೆನು............

ಮಹಾ:—ಮುಂದೇನಾಯಿತು?

ಚಂದ್ರಾ:—ಈ ದಿವಸ ಮೃಗಯಾವಿಹಾರಾರ್ಥವಾಗಿ ಈ ವನ ದಲ್ಲಿ ಸಂಚರಿಸುತ್ತಿರಲು, ಅಕಸ್ಮಾತ್ತಾಗಿ ಕಿನ್ನರದಂಪತಿಗಳು ನನ್ನ ದೃಷ್ಟಿಗೆ ಬಿದ್ದವು; ಅವುಗಳನ್ನು ಹಿಡಿಯಬೇಕೆಂಬ ಹಂಬಲದಿಂದ ಬೆಂಬತ್ತಿ ಈ ಸರೋವರದ ವರೆಗೆ ಬಂದೆನು.

ಮಹಾ:—ಅವು ಯಾವ ಕಡೆಗೆ ಹೋದವು?

ಚಂದ್ರಾಪೀಡ:—ಭಗವತೀ, ಮಾರ್ಗದಲ್ಲಿ ಬರಬರುತ್ತ ಅದೃಶ್ಯ ವಾಗಿ ಹೋದವು.

ಮಹಾ:—ರಾಜಪುತ್ರನೆ, ಈ ದೇವಾಲಯದ ವರೆಗೆ ಬರಲು ಕಾರಣವೇನು?

ಚಂದ್ರಾಪೀಡ:—ದೇವೀ, ಮತ್ತೇನೂ ಇಲ್ಲ; ನಿನ್ನ ಈ ಮಧುರ ಗೀತಧ್ವನಿಯನ್ನು ಕೇಳಿ ಬಂದೆನು?

ಮಹಾ:—ರಾಜಪುತ್ರನೆ, ನೀನು ಈಗ ಹಸಿವೆಯಿಂದ ಬಹಳ ಬಳಲುತ್ತಿರಬಹುದಲ್ಲವೆ? ತುಸುಹೊತ್ತು ಇಲ್ಲಿಯೇ ವಿಶ್ರಮಿಸು; ನಿನ ಗೋಸ್ಕರ ಫಲಮೂಲಗಳನ್ನು ತೆಗೆದುಕೊಂಡು ಬರುವೆನು.

ಚಂದ್ರಾ:—ಭಗವತೀ, ಕಲ್ಯಾಣಕರವಾದ ನಿನ್ನ ಮುಖಮುದ್ರೆ ಯನ್ನೀಕ್ಷಿಸುತ್ತಲೇ ನನ್ನ ಹಸಿವೆನೀರಡಿಕೆಗಳೆಲ್ಲ ಶಾಂತವಾದವು; ಈಗ ನಾನು ವಿಚಾರಿಸುವ ಸಂಗತಿಯ ವಿಷಯವಾಗಿ ಮಾತ್ರ ಸರಿಯಾಗಿ ಉತ್ತರಕೊಟ್ಟು ಅನುಗ್ರಹಿಸು; ಇಷ್ಟೇ ನನ್ನ ಪ್ರಾರ್ಥನೆಯು.

ಮಹಾ:—ಅಪ್ಪಾ! ನಿರ್ಭಾಗ್ಯಳಾದ ನನ್ನನ್ನು ಏನನ್ನು ಕೇಳ ಲಿಚ್ಛಿಸುವೆ?

ಚಂದ್ರಾ:—ಮಹಾಸಾಧ್ವಿಯೇ ಮತ್ತೇನೂ ಇಲ್ಲ.

||ಕಂದ|| ಸುರವಂಶದೊಳುದಿಸಿರ್ಪೆಯೊ |
ವರಗುಹ್ಯಕಸಿದ್ಧರುಗಳು ಪಡೆದರೊ ನಿನ್ನಂ ||
ಒರೆಗಂಧರ್ವಾಪ್ಸರರೊಳು |
ನೆರೆಜನ್ಮಿಸಿಯುವರ ಕುಲವನುದ್ಧರಿಸಿದೆಯೋ? ||೧||

ಭಗವತೀ, ಅದರಂತೆ:—

||ಕಂದ|| ಎತ್ತಣತಪಮೆತ್ತಣಚಲು-|
ವೆತ್ತಣನವಯೌವನಂಸುನಿಗ್ರಹವೆನಿತೌ? ||
ಚಿತ್ತವ ಪುಗಿಸಿಹೆವ್ರತದೊಳ್ |
ಬಿತ್ತರಿಸೀಕ್ಷಣದೊಳಿದರ ಕಾರಣವೇನೀಂ ||೧||

ಮತ್ತು ಯಾವ ಪಂಚಮಹಾಭೂತಗಳಿಂದ ನಮ್ಮ ಶರೀರವು ನಿರ್ಮಾಣವಾಗಿರುವದೋ, ಅವುಗಳಿಂದಲೇ ನಿನ್ನ ಶರೀರವುಂಟಾಗಿರು ವುದು; ಹೀಗಿದ್ದು ನಿನ್ನ ಶರೀರಕ್ಕೆ ಇಷ್ಟೇಕೆ ಶುಭ್ರವರ್ಣಬಂದಿರುವುದು?

ಮಹಾ:—ಭಾಗ್ಯಶಾಲಿಯೇ !||ಪದ||("ಮೂರ್ತಿಮಂತ" ಎಂಬಂತೆ)
ಪಾಪಿನಾನು ಚಾಂಡಾಲಿಯು ವ್ಯರ್ಥಜೀವಿಪೆಂ ಪ||

ಈ ಪರಿಯನೇವೇಳ್ವೆಂ ಲೋಕನಿಂದಿತಳ್ ||ಅ. ಪ.||
ಜನನಿಜನಕರುಗಳ ಮನಕೆಬರಿದೆತಾಪವಿತ್ತೆಂಭುವನ ||
ವಿನುತದ್ವಿಜನ ಪ್ರಾಣಸೆಳೆದು ಪಾಪಗಳಿಸಿದೆಂ ||೧||

(ಅಳಹತ್ತುವಳು.)

ಚಂದ್ರಾ:—(ಅಳುವದನ್ನು ನೋಡಿ ತನ್ನೊಳಗೆ) ಅರರೆ! ಇದೇನು ಅನಿಷ್ಟವಾಯಿತಲ್ಲ! ಈ ಮಹಾಸಾಧ್ವಿಯ ವೃತ್ತಾಂತ ತಿಳಿಯುವದಕ್ಕಾಗಿ, ನನ್ನ ಮನಸ್ಸು ಹೆಚ್ಚು ಹೆಚ್ಚು ಆತುರ ಪಡಹತ್ತಿತು: (ಪ್ರಕಾಶವಾಗಿ) ಎಲೌ ಸಾಧ್ವೀಮಣಿಯೇ, ಪೂರ್ವದಲ್ಲಿ ನಡೆದಂಥ ನಿನ್ನ ದುಃಖದಾಯಕ ವೃತ್ತಾಂತವನ್ನು ನೆನಪಿಗೆ ತಂದುಕೊಟ್ಟು, ನಾನೇ ನಿನ್ನನ್ನು ಶೋಕಸಾಗರ ದಲ್ಲಿ ಮುಳುಗಿಸಿದಂತಾಯಿತು; ನನ್ನಿಂದಾದ ಈ ಅಪರಾಧವನ್ನು ಕ್ಷಮಿಸು.

ಮಹಾ:—ರಾಜಪುತ್ರನೆ, ನಾನು ಕ್ಷಮಿಸಲಿಕ್ಕೆ ನಿನ್ನಿಂದಾದ ಅಪ ರಾಧವಾದರೂ ಏನು? ಆದೆಲ್ಲ ಸಂಗತಿಯು ನಡೆದಾಗಿನಿಂದಲೇ ನನ್ನ ಕಣ್ಣೆದುರಿಗೆ ಕಟ್ಟಿಯೇ ಇರುತ್ತದೆ; ನಿನ್ನಂಥ ಸತ್ಪುರುಷನ ಮುಂದೆ ಹೇಳಿದರೆ, ನನ್ನ ದುಃಖವು ಸ್ವಲ್ಪಮಟ್ಟಿಗಾದರೂ ಕಡಿಮೆಯಾಗಬಹುದು; ಕೇಳು:—ಸುರಾಂಗನೆಯರಲ್ಲಿ ಹದಿನಾಲ್ಕು ಕುಲಗಳುಂಟು; ಅವುಗಳೊ ಳಗಿನ ಶಶಿಕಿರಣೋದ್ಭೂತವೆಂಬ ಕುಲದಲ್ಲಿ ನಾನು ಹುಟ್ಟಿದೆನು; ನನ್ನ ತಾಯಿಯ ಹೆಸರು ಗೌರಿಯು, ಹಂಸನೆಂಬುವನು ತಂದೆಯು, ನನ್ನ ಶರೀರ ವರ್ಣಕ್ಕೆ ಸರಿಯಾಗಿ ನನಗೆ ಮಹಾಶ್ವೇತೆಯೆಂದು ಹೆಸರಿಟ್ಟರು; ಬಾಲ್ಯಾ ವಸ್ಥೆಯನ್ನು ಅತಿಸುಖರೂಪದಿಂದ ಕಳೆದೆನು; ತರುವಾಯ ಮಾಧವೀ ಲತೆಯ ಕುಸುಮಶ್ರೀಯಂತೆ, ನನ್ನ ತಾರುಣ್ಯವು ಕ್ರಮ ಕ್ರಮವಾಗಿ ಹೆಚ್ಚುತ್ತ ಹೋಯಿತು; ಹೀಗಿರುತ್ತಿರಲು, ವಸಂತಮಾಸದಲ್ಲಿ ಒಂದಾ ನೊಂದು ದಿವಸ ತಾಯಿಯ ಸಂಗಡ ಸ್ನಾನಾರ್ಥವಾಗಿ ಈ ಸರೋವರಕ್ಕೆ ಬಂದಿದ್ದೆ........(ಅಳುತ್ತ) ದೇವಾ! ಆ ದಿವಸವು ಉದಯವಾಗದಿದ್ದರೆ ಬಹಳೇ ಒಳಿತಾಗುತ್ತಿತ್ತು; ಯಾವ ದಿವಸ ಲಗ್ನಮಾಡಿಕೊಳ್ಳಬೇಕೆಂದು

ನಿಶ್ಚಯಿಸಿದ್ದೆನೋ ಅದೇ ದಿವಸ ವೈಧವ್ಯಕ್ಕೆ ಗುರಿಯಾದೆನು.

ಚಂದ್ರಾ:—(ಮನಸ್ಸಿನಲ್ಲಿ) ಶಿವಶಿವ! ಗುಣಯೌವನ ಕುಲರೂಪ ಸಂಪನ್ನೆಯಾದ ಈ ಮಹಾಸಾಧ್ವಿಯು, ಈ ಪರಿ ಕಷ್ಟಗಳನ್ನನುಭವಿಸ ಬೇಕೆಂದು ಬ್ರಹ್ಮಸಂಕಲ್ಪವಿರಬಹುದೇ? ಉಪಾಯವಿಲ್ಲ; ವಿಧಿನಿಯಮ ವನ್ನು ತಪ್ಪಿಸುವದು ಯಾರಿಂದಲೂ ಆಗದು; (ಪ್ರಕಾಶವಾಗಿ) ದೇವೀ ನಿನ್ನ ಆಪ್ತೇಷ್ಟರುಗಳಾರೂ ನಿನ್ನ ಕ್ಷೇಮಸಮಾಚಾರವನ್ನು ತೆಗೆದು ಕೊಳ್ಳುವದಿಲ್ಲವೆ?

ಮಹಾ:—ಅಪ್ಪಾ, ನನ್ನ ತಾಯಿತಂದೆಗಳೂ, ಇತರ ಬಂಧು ವರ್ಗದವರೂ ಇಲ್ಲಿಯ ವರೆಗೆ ಬಂದು ನನ್ನನ್ನು ಮನೆಗೆ ಕರೆದುಕೊಂಡು ಹೋಗುವದಕ್ಕಾಗಿ ಬಹಳ ಪ್ರಯತ್ನ ಮಾಡಿದರು......................

ಚಂದ್ರಾ:—ಅದೆಲ್ಲ ವ್ಯರ್ಥವಾದಂತೆ ಕಾಣುತ್ತದೆ.

ಮಹಾ:—ಹೌದು, ನಾನು ಅವರ ಮಾತಿಗೆ ಒಡಂಬಡಲಿಲ್ಲ. ಆದರೂ ಮಕ್ಕಳ ಮೇಲಿನ ಪ್ರೇಮವು ಹ್ಯಾಗೆ ಹೋಗಬೇಕು? ಅವರು ನನ್ನನ್ನು ಮರೆಯದೆ ಮೇಲಿಂದ ಮೇಲೆ ನನ್ನ ಸಮಾಚಾರ ತೆಗೆದುಕೊಳ್ಳು ತ್ತಿರುವರು. ಅಪ್ಪಾ, ನನ್ನ ಕಥೆಯು ಇಷ್ಟಕ್ಕೇ ತೀರಲಿಲ್ಲ; ಇರಲಿ, ಇಂದು ಪ್ರಾತಃಕಾಲದಿಂದ ನಿನಗೆ ಅನ್ನವೇ ಇಲ್ಲ. ಆದ್ದರಿಂದ ನನ್ನ ಸಂಗಡ ಬಾ; ಇಲ್ಲಿಯೇ ನಾನು ವಾಸಿಸುವ ಗವಿಯುಂಟು; ಅಲ್ಲಿ ಉತ್ತಮೋತ್ತಮ ವಾದ ಫಲಮೂಲಗಳನ್ನು ಸವಿದು ತೃಪ್ತನಾಗು; ತರುವಾಯ ಈ ಹತ ಭಾಗ್ಯಳ ಸರ್ವವೃತ್ತಾಂತವನ್ನು ಕೇಳಿಕೊ.

ಚಂದ್ರಾ:—(ತನ್ನಲ್ಲಿ) ಇವಳ ವೃತ್ತಾಂತವಾದರೂ ದುಃಖದಾಯಕ ವಾದದ್ದಿರುವಂತೆ ತೋರುತ್ತದೆ. ಮೇಲಾಗಿ ಪೂರ್ವದಲ್ಲಿ ನಡೆದ ಸಂಗ ತಿಯ ಸ್ಮರಣದಿಂದುಂಟಾದ ಶೋಕವು ಇವಳನ್ನು ಆವರಿಸಿರುವದು. ಇಂಥ ವೇಳೆಯಲ್ಲಿ ವಿಶೇಷ ಆಗ್ರಹಮಾಡುವದು ಒಳಿತಲ್ಲ. (ಪ್ರಕಾಶವಾಗಿ) ದೇವೀ ಮಹಾಶ್ವೇತೆ ನಿನ್ನ ಅಪ್ಪಣೆಯಂತೆ ಬರಲಿಕ್ಕೆ ಸಿದ್ಧನಿರುವೆನು.

(ಎದುರಿಗೆ ನೋಡಿ) ಭಗವತೀ, ಇತ್ತಲೀಮಾರ್ಗವಾಗಿ ನೋಡು; ಯಾರೋ ಬರುವಂತೆ ಕಾಣುತ್ತದೆ.

ಮಹಾ:—(ನೋಡಿ) ಹೌದು, ನನ್ನ ಸಖೀ ತರಲಿಕೆಯೂ, ಕೇಯೂರಕನೂ ಬರುತ್ತಿರುವರು.

ಚಂದ್ರಾ:—ಕೇಯೂರಕನೆಂದರೆ ಯಾರು?

ಮಹಾ:—ಕಾದಂಬರಿಯ ವೀಣಾವಾಹಕನು.

ಚಂದ್ರಾ:—ಒಳ್ಳೇದು ಕಾದಂಬರಿಯು ಎಲ್ಲಿರುವಳು?

ಮಹಾ:—ಅವಳು, ಗಂಧರ್ವಕುಲಕ್ಕೆ ಅಧಿಪತಿಯಾದ ಚಿತ್ರರಥನೆಂಬ ಅರಸನ ಮಗಳು. ಅವಳ ತಾಯಿಯು ಮದಿರಾ ಎಂಬ ಅಪ್ಸರೆಯು; ನನ್ನ ತಂದೆಯಾದ ಹಂಸನಾದರೂ ಈ ಚಿತ್ರರಥರಾಜನ ಆಧಿಪತ್ಯದ ಕೆಳಗೇ ಇರುವನು. ಇವಳ ತಂದೆಗೆ ಇವಳೊಬ್ಬಳೇ ಮಗಳು; ನಮ್ಮ ತಂದೆಗಾದರೂ ನಾನೊಬ್ಬಳೇ ಇರುವೆನು. ರಾಜಪುತ್ರನೇ ನಮ್ಮಿಬ್ಬರ ಸಖೀತ್ವವನ್ನು ಎಷ್ಟೆಂದು ಹೇಳಲಿ!

||ಪದ|| ರಾಗ—ಯಮುನ, ತಾಳ—ಆದಿ.

ನಾಂಪೇಳುವುದನುನೀಂಲಾಲಿಸು ಜನಪಾ ಮೋದದಿಂ ||ಪ||
ಭಾವಿಸು ನಮ್ಮಯದೇಹಗಳೆರಡ್ಕೆ ||
ಜೀವವಿದೊಂದಾಗಿರ್ಪುದುನಿಜದಿಂ ಸಂತತಂ ||೧||
ಅನ್ನಪಾನಾದಿಗಳ್ ಶಯನವಿಹಾರಗಳ್ ||
ಮುನ್ನಮಪ್ಪೊಂದೆಡೆಯುಲ್ಲಾದವುಕೇಳ್ ಬಾಲ್ಯದೆ ||೨||
ಗೀತಮೃದಂಗಸುವಿದ್ಯೆಗಳೆಲ್ಲವಂ ||
ಪ್ರೀತಿಯೊಳೊಂದೇತಾಣದೆ ನಾವು ಕಲಿತೆವ್ವೆ ||೩||

ಇಷ್ಟೇಅಲ್ಲ; ನಾನು ಈ ಕಷ್ಟದಿಂದ ಬಿಡುಗಡೆ ಹೊಂದುವ ವರೆಗೆ ತಾನು "ಲಗ್ನವನ್ನೇ ಮಾಡಿಕೊಳ್ಳುವದಿಲ್ಲ"ವೆಂದು ಆ ನನ್ನ ಪ್ರಿಯಸಖಿಯು ನಿಶ್ಚಯಿಸಿರುವಳು.

ಚಂದ್ರಾ:—ವಾಃ ನಿಜವಾದ ಸ್ನೇಹವೆಂದರೆ ಇದಕ್ಕೇ ಅನ್ನಬೇಕು; ಒಳ್ಳೇದು ಮುಂದೆ?

ಮಹಾ:—ಅವಳು ಇಷ್ಟಕ್ಕೇ ಬಿಡಲಿಲ್ಲ. ತನ್ನ ಸಖೀಜನರ ಮುಂದೆ ಇದಕ್ಕೂ ಹೆಚ್ಚಿಗೆ ಕಠೋರತನದ ಮಾತುಗಳನ್ನಾಡಿ ತೋರಿಸಿರುವಳು.

ಚಂದ್ರಾ:—ಏನೆಂದು?

ಮಹಾ:—"ತಂದೆತಾಯಿಗಳು ಒಂದುವೇಳೆ ನನಗೆ ಬಲಾತ್ಕಾರದಿಂದ ಲಗ್ನಮಾಡಲುಪಕ್ರಮಿಸಿದರೆ ಯಾವದಾದರೊಂದು ಸಾಧನದಿಂದ ಆತ್ಮಹತ್ಯ ಮಾಡಿಕೊಳ್ಳುವೆನು" ಎಂದು.

ಚಂದ್ರಾ:—ಶಾಬಾಸ್! ಗಂಧರ್ವ ಕನ್ಯಾಮಣಿ ಕಾದಂಬರಿ, ನಿನ್ನ ಸಖಿಯಂತೆ ನೀನಾದರೂ ಧನ್ಯಳೇ ಇರುವಿ (ಪ್ರಕಾಶವಾಗಿ) ದೇವೀ ಮಹಾಶ್ವೇತೆ, ಅವಳ ಈ ಮನೋನಿಶ್ಚಯದಲ್ಲಿ ಎಂದಿಗೂ ಕೊರತೆಯುಂಟಾಗಲಿಕ್ಕಿಲ್ಲವೇ?

ಮಹಾ:—ಛೇ ಛೇ! ಇಷ್ಟು ವರ್ಷಗಳಾದರೂ ಇವಳ ಮನೋನಿಶ್ಚಯದಲ್ಲಿ ಒಂದು ಕಡ್ಡಿ ಸಹ ಕಲಕಿಲ್ಲ; ತಂದೆ-ತಾಯಿಗಳೂ, ಆಪ್ತೇಷ್ಟರೂ, ಸಖೀಜನರೂ ಪರಿಪರಿಯಿಂದ ಹೇಳಿದರು; ಆದರೆ ಅವರ ಪ್ರಯತ್ನಗಳೆಲ್ಲ ವ್ಯರ್ಥವಾಗಿ ಹೋದವು. ಕಟ್ಟಕಡೆಗೆ ಅವಳಿಗೆ ಉಪದೇಶ ಮಾಡುವ ಒಗ್ಗೆ ಮದಿರಾದೇವಿಯವರಿಂದ ನಿನ್ನಿನ ದಿವಸ ನನಗೆ ನಿರೋಪ ಬಂದಿರುವದು.

ಚಂದ್ರಾ:—ಏನೆಂದು ಆಜ್ಞಾಪಿಸಿರುವರು?

ಮಹಾ:—"ಕಾದಂಬರಿಯು ತನ್ನ ಹಟವನ್ನು ಬಿಡಲೊಲ್ಲಳು. ಲಗ್ನಮಾಡಿಕೊಳ್ಳುವಬಗ್ಗೆ ನೀನಾದರೂ ಅವಳಿಗೆ ನಾಲ್ಕು ಮಾತುಗಳನ್ನು ಹೇಳಿ ನೋಡು" ಎಂದು ಹೇಳಿಕಳಿಸಿರುವರು.

ಚಂದ್ರಾ:—ಒಳ್ಳೇದು ಈ ವಿಷಯವಾಗಿ ನೀನೇನು ಮಾಡಿದೆ?

ಮಹಾ:—ಇದಕ್ಕೋಸ್ಕರವೇ ಈ ದಿವಸ ನೀನು ಬರುವ ಪೂರ್ವ

ದಲ್ಲಿ ತರಲಿಕೆಯನ್ನು ಕಾದಂಬರಿಯ ಕಡೆಗೆ ಕಳುಹಿದ್ದೆನು. ಇವಳು ನನ್ನ ನಿರೋಪವನ್ನು ಹೇಳಿ ತಿರುಗಿ ಬಂದಳು. ಆದರೆ ಈ ಕೇಯೂರಕನು ಯಾಕೆ ಬಂದನೋ ತಿಳಿಯದು.

(ಇಷ್ಟರಲ್ಲಿ ತರಲಿಕೆಯೂ ಕೇಯೂರಕನೂ ಬಂದು, ಮಹಾಶ್ವೇತೆಗೆ ವಿನಯಪೂರ್ವಕವಾಗಿ ನಮಸ್ಕರಿಸಿ ಚಕಿತಮುದ್ರೆಯಿಂದ ಚಂದ್ರಾಪೀಡನ ಕಡೆಗೆ ನೋಡುತ್ತ ನಿಲ್ಲುವರು.)

ಮಹಾ:—ತರಲಿಕೇ, ಕಾದಂಬರಿಯು ಕ್ಷೇಮದಿಂದಿರುವಳೇ? ನನ್ನ ನಿರೋಪವನ್ನು ಅವಳಿಗೆ ತಿಳಿಸಿದೆಯಾ?

ತರಲಿಕೆ:—ಹೌ ಕ್ಷೇಮದಿಂದಿರುವಳು; ಅವಳು ನೀನು ಹೇಳಿ ಕಳುಹಿಸಿದ ಮಾತುಗಳನ್ನು ಕೇಳುತ್ತಲೇ ಅಳಹತ್ತಿದಳು.

ಮಹಾ:—(ತನ್ನಲ್ಲಿ) ಬಹುಶಃ ಈ ಮಾತು ಅವಳಿಗೆ ರುಚಿಸಿರಲಿಕ್ಕಿಲ್ಲ. (ಪ್ರಕಾಶವಾಗಿ) ಒಳ್ಳೇದು, ಏನೆಂದಳು.

ತರಲಿಕೆ:—ಅವಳು ಏನು ಹೇಳಿರುವಳೆಂಬದು ಕೇಯೂರಕನನ್ನು ಕೇಳಿದರೆ ಗೊತ್ತಾಗುವದು.

ಮಹಾ:—ಕೇಯೂರಕಾ, ಕಾದಂಬರಿಯು ಏನು ಹೇಳಿದಳು? ಲಗ್ನ ಮಾಡಿಕೊಳ್ಳಲಿಕ್ಕೆ ಒಡಂಬಟ್ಟಳೇನು?

ಕೇಯೂರಕ:—(ಕೈಜೋಡಿಸಿ) ದೇವೀ, ಅವರು ಈ ಮಾತಿಗೆ ಒಪ್ಪಲಿಲ್ಲ. "ತಾನು ವನವಾಸಿಯಾಗಿ ಪರಿಪರಿಕಷ್ಟಗಳನ್ನನುಭವಿಸುತ್ತಿರುವ ವೇಳೆಯಲ್ಲಿ, ನಾನು ಅರಮನೆಯಲ್ಲಿದ್ದು ಸುಖದಿಂದ ಕಾಲಕಳೆಯುತ್ತಿರುವೆನೆಂಬ ಮನಸ್ಸಿನ ವಿಪರೀತಕಲ್ಪನೆಯಿಂದ ಈ ಬಗೆಯ ಮರ್ಮಭೇದಕ ನಿರೂಪವನ್ನು ಕಳಿಸಿರುವಳೇನು?'' ಎಂದು ಅತಿಸಂತಪ್ತ ಮುದ್ರೆಯಿಂದ ನನ್ನ ಕಡೆಗೆ ನೋಡುತ್ತ ಹೇಳಿದರು.

ಮಹಾ:—(ವಿಚಾರಮಾಡಿ) ಒಳ್ಳೇದು, ಕೇಯೂರಕಾ ನೀನು ಮೊದಲು ಹೋಗು, ನಾನಾದರೂ ನಾಳಿನ ದಿವಸ ಪ್ರಾತಃಕಾಲಕ್ಕೆ ಅವಳ

ಭೆಟ್ಟಿಗೆ ಬರುವೆನು; ಆಗ್ಗೆ ಹೇಳಬೇಕಾದ್ದನ್ನು ಅವಳ ಮುಂದೆ ಹೇಳುವೆನು.

ಕೇಯೂರಕ:—ಅಪ್ಪಣೆ (ಎಂದು ನಮಸ್ಕರಿಸಿ ಹೋಗುವವನು)

ಮಹಾ:—(ವಿಚಾರಿಸಿ ತನ್ನಲ್ಲಿ) ಈ ರಾಜಪುತ್ರನು ಸರ್ವಲಕ್ಷಣ ಸಂಪನ್ನನಾಗಿರುವನು; ಇವನನ್ನು ಕಾದಂಬರಿಯ ಅಂತಃಪುರಕ್ಕೆ ಕರೆದು ಕೊಂಡುಹೋಗಿ, ಪರಸ್ಪರರಲ್ಲಿ ಅನುರಾಗವು ಹುಟ್ಟುವಂತೆ ಮಾಡಿ, ಇವ ನನ್ನು ಲಗ್ನವಾಗುವಬಗ್ಗೆ ಅವಳಿಗೆ ಉಪದೇಶಮಾಡಿ ನೋಡುವೆನು. (ಪ್ರಕಾಶವಾಗಿ) ರಾಜಪುತ್ರನೆ, ನನ್ನದೊಂದು ವಿನಂತಿಯುಂಟು; ಮಾನ್ಯ ಮಾಡುವೆನೆಂದು ವಚನಕೊಟ್ಟರೆ ಹೇಳುವೆನು.

ಚಂದ್ರಾ:—ದೇವೀ ಆಜ್ಞಾಪಿಸತಕ್ಕದ್ದನ್ನು ಆಜ್ಞಾಪಿಸು; ಸಂತೋಷ ದಿಂದ ಪಾಲಿಸುವೆನು.

ಮಹಾ:—ಕೇಳು, ಚಿತ್ರರಥಗಂಧರ್ವರಾಜನೂ, ನಮ್ಮತಂದೆಯಾದ ಹಂಸರಾಜನೂ ವಾಸವಾಗಿರುವ ಹೇಮಕೂಟವೆಂಬ ಪರ್ವತವು ಬಹು ರಮ್ಯವಾಗಿರುವದು; ಅಲ್ಲಿಯ ಅರಮನೆಯಂತೂ ವರ್ಣಿಸಲಸಾಧ್ಯವಾಗಿ ರುವದು; ನಿನ್ನಂಥವರು ಆ ಸ್ಥಳವನ್ನು ಅವಶ್ಯವಾಗಿ ನೋಡತಕ್ಕದ್ದು; ಅಲ್ಲಿ ವಾಸಿಸತಕ್ಕ ನನ್ನ ಸಖೀ ಕಾದಂಬರಿಯನ್ನಂತೂ ಎಷ್ಟು ವರ್ಣಿಸಿ ದರೂ ತೀರದು; ಇವಳು ಸ್ವಭಾವದಿಂದ ಸರಳಳಾದವಳು; ಸಹಜ ಪ್ರೇಮವುಳ್ಳವಳು; ಮೇಲಾಗಿ ದೊಡ್ಡ ಮನಸ್ಸಿನವಳು; ರೂಪದಲ್ಲಂತೂ ಪ್ರತ್ಯಕ್ಷ ರತಿಯು ಸಹ ಅವಳಿಗೇಕೆ? ಅವಳ ದಾಸಿಯ ದಾಸಿಗೆ ಸಹ ಸರಿ ಯಾಗಲಿಕ್ಕಿಲ್ಲ; ಇಂಥ ಅನುಪಮಸುಂದರಿಯು; ಆದದ್ದರಿಂದ ನಿನ್ನ ಸಹಸ್ರ ಕೆಲಸಗಳಿದ್ದರೂ ಬಿಟ್ಟು ನನ್ನ ಸಂಗಡ ಅಲ್ಲಿಯ ವರೆಗೆ ಬಂದು, ಸರ್ವ ಸೌಂದರ್ಯವನ್ನೂ ನೋಡಿ, ನನ್ನ ಪ್ರಿಯಸಖಿಗೆ ದರ್ಶನಕೊಟ್ಟು ನಾಲ್ಕು ದಿವಸ ಅಲ್ಲಿಯೇ ಇರಬೇಕೆಂದು ಬಯಸುವೆನು.

ಚಂದ್ರಾ:—(ಸಂತೋಷದಿಂದ ತನ್ನಲ್ಲಿ) ನಾನಾದರೂ ಇದನ್ನೇ ಇಚ್ಛಿಸುತ್ತಿದ್ದೆನು. (ಪ್ರಕಾಶವಾಗಿ) ದೇವೀ, ಸಂತೋಷದಿಂದ ಬರುವೆನು.

ಮಹಾ:—ನೀನು ನನ್ನ ವಿನಂತಿಯನ್ನು ಮನ್ನಿಸಿದ್ದನ್ನು ನೋಡಿ ಬಹಳ ಸಂತೋಷವಾಯಿತು. ಒಳ್ಳೇದು, ಇಂದು ಪ್ರಾತಃಕಾಲದಿಂದ ನಿನಗೆ ಅನ್ನವೇ ಇಲ್ಲ. ಹಸಿವೆಯಿಂದ ಕಸವಿಸಿಯಾಗುತ್ತಿರಬಹುದು; ಫಲಾಹಾರದ ಕೆಲಸ ತೀರಿಸಿಕೊಂಡು ಸ್ವಲ್ಪ ವಿಶ್ರಾಂತಿ ಹೊಂದು; ಹಾಗು ರಾತ್ರಿಯಲ್ಲಿ ಪಲ್ಲವತಲ್ಪದ ಮೇಲೆ ಮಲಗಿ ಸ್ವಸ್ಥನಿದ್ರೆಮಾಡು; ಸೂರ್ಯೋದಯವಾಗುತ್ತಲೇ ಇಲ್ಲಿಂದ ಹೊರಡೋಣ; ನಾನು ಸ್ನಾನಕ್ಕೋಸ್ಕರ ಹೋಗುವೆನು. ತರಲಿಕೇ, ನೀನು ಹೋಗಿ ಉತ್ಕೃಷ್ಟ ಫಲಮೂಲಗಳನ್ನು ತೆಗೆದುಕೊಂಡು ಬಾ, ಹಾಗು ಇವನ ಫಲಾಹಾರದ ಕೆಲಸ ತೀರುವಷ್ಟರಲ್ಲಿ ಪಲ್ಲವತಲ್ಪವನ್ನು ಸಿದ್ಧಗೊಳಿಸು.

ತರಲಿಕೆ:—ಹಾಗೇ ಆಗಲಿ, ನೀನು ಸ್ನಾನಕ್ಕೆ ನಡೆ; ನಾನು ಫಲಮೂಲಗಳನ್ನು ತರಹೋಗುವೆನು. (ಇಬ್ಬರೂ ಹೋಗುವರು.)

ಚಂದ್ರಾ:—ಈ ಆನಂದಾಶ್ಚರ್ಯ ತರಂಗಗಳ ಪರಮಾವಧಿಯು, ಅಂತ್ಯದಲ್ಲಿ ಎಷ್ಟು ಸುಖಕೊಡುತ್ತದೆಂಬದರ ಕಲ್ಪನೆಯನ್ನೇ ಮಾಡಲಿಕ್ಕೆ ಬರುವಂತಿಲ್ಲ. ಕಿನ್ನರಮಿಥುನಗಳನ್ನು ಹಿಡಿಯಬೇಕೆಂಬ ಇಚ್ಛೆಯಿಂದ ನಾನು ಪಟ್ಟಶ್ರಮವೆಲ್ಲ ನಿಷ್ಫಲವಾಯಿತೆಂದು ಭಾವಿಸಿದ್ದೆನು; ಆದರೆ ಅದೇ ಈಗ ನನ್ನ ಹಿತಕ್ಕೆ ಅನುಕೂಲವಾಗಿ ಪರಿಣಮಿಸುವದಾಯಿತು.

||ಪದ|| ("ಆತಾ ಶಶಿಮುಖಿಚಾ" ಎಂಬಂತೆ)

ಮೃಗಯಾಸಮಯದೆಹಯಮುಖಯುಗಲವನಾಂ ನೋಡಿದೆಂ ||ಪಲ್ಲ||<br>
ಲಗಬಗೆಯಿಂದಂ ಪಿಡಿಯಲ್ಕವುಗಳ ಸರಸಿಯ ಬಳಿಗಾನ್ವೈದಿದೆಂ ||<br>
ಸೊಗಸಿನಮಧುರಧ್ವನಿಯನು ಕೇಳುತಲಾನಂದವನಾಂ ಪೊಂದಿದೆಂ ||<br>
ಅಗಜಾಸಮವರ ಸಾಧ್ವೀದರ್ಶನಗೊಳ್ಳುತೆ ಪಾಪವನೀಗಿದೆಂ ||೧||

———

## ಆರನೆಯ ಪ್ರವೇಶ.

ಸ್ಥಳ:—ಕಾದಂಬರಿಯ ಅಂತಃಪುರ.

(ಕಾದಂಬರಿಯೂ ಕೇಯೂರಕನೂ ಮಾತಾಡುತ್ತಿರುವರು.)

ಕಾದಂಬರಿ:—ಒಳ್ಳೇದು ಅವನ ವಯಸ್ಸೆಷ್ಟಾದೀತು?

ಕೇಯೂರಕ:—ಇಪ್ಪತ್ತು ಇಪ್ಪತ್ತೆರಡು ವರ್ಷಗಳಾಗಿರಬಹುದು.

ಕಾದಂಬರಿ:—(ತನ್ನಲ್ಲಿ) ಹಾ! ಪುಂಡರೀಕನಾಗಿರಬಹುದೇನು? (ವಿಚಾರಿಸಿ) ಛೇ ಛೇ ಮಹಾಶ್ವೇತಾ ಪುಂಡರೀಕರ ವಿಯೋಗವಾಗಿಯೇ ಇಪ್ಪತ್ತು ವರ್ಷಗಳಾಗಿ ಹೋದವು; ಅಂದಮೇಲೆ ಇನ್ನೆಲ್ಲಿ ಇಪ್ಪತ್ತು ವರುಷದ ಪುಂಡರೀಕನು! (ವಿಚಾರಿಸಿ) ಛೇ! ನನ್ನ ವಿಚಾರವು ತಪ್ಪಾಯಿತು; ಪುಂಡರೀಕನು ದೇವಲೋಕದಲ್ಲಿ ವಾಸಿಸುತ್ತಿರುವನೆಂದ ಬಳಿಕ ನಮ್ಮಂತೆ ಅವನಿಗಾದರೂ ಯೌವನವು ಶಾಶ್ವತವಾದದ್ದು. (ಪ್ರಕಾಶವಾಗಿ)ಒಳ್ಳೇದು, ಅವನು ರೂಪದಿಂದ ಹೇಗಿರುವನು?

ಕೇಯೂ:—ದೇವೀ, ಹೆಚ್ಚಿಗೆ ಹೇಳುವದೇನು? ಸರ್ವಾಂಗಸುಂದರನು; ತ್ರಿಭುವನ ಸುಂದರನಾದಂಥ ಮನ್ಮಥನುಸಹ ಅವನಮುಂದೆ ಅತಿ ಕುರೂಪಿಯೆಂದು ಹೇಳಿದರೆ ಏನೂ ತಪ್ಪಾಗದು.

ಕಾದಂಬರಿ:—ಒಳ್ಳೇದು, ಮಹಾಶ್ವೇತೆಗೂ ಅವನಿಗೂ ಪರಿಚಯವೆಲ್ಲಿಯದು? ಅವನು ಯಾರು? ಅವನ ಹೆಸರೇನು? ಇದೆಲ್ಲ ನಿನಗೆ ಗೊತ್ತುಂಟೋ?

ಕೇಯೂರಕ:—ಭರ್ತೃದಾರಿಕೇ, ಹೆಚ್ಚಿನ ಸಂಗತಿಯು ಯಾವದೂ ನನಗೆ ಗೊತ್ತಿಲ್ಲ. ಮಹಾಶ್ವೇತೆಯವರಿಗೂ ಅವನಿಗೂ ಪರಿಚಯವು ಮಾತ್ರ ಚನ್ನಾಗಿರುವದು.

ಕಾದಂಬರಿ:—ಮಹಾಶ್ವೇತೆಯ ಸಂಗಡ ಅವನು ಇಲ್ಲಿಯವರೆಗೆ ಬರಬಹುದೇನು?

ಕೇಯೂರಕ:—ದೇವೀ ಅದನ್ನು ನಾನೇನು ಹೇಳಲಿ!

ಪ್ರತೀಹಾರಿ:—(ಪ್ರವೇಶಿಸಿ) ದೇವೀ ಕಾದಂಬರಿ, ಮಹಾಶ್ವೇತೆಯೂ ಬಂದಳು.

ಕಾದಂಬರಿ:—ಎಲ್ಲಿರುವಳು? (ಅವಸರದಿಂದ ಎದ್ದು ಮುಂದಕ್ಕೆ ಹೋಗುವಳು ಮತ್ತು ಮಹಾಶ್ವೇತೆಯನ್ನು ನೋಡಿದಕೂಡಲೇ ಅವಳಿಗೆ ಪ್ರೇಮದಿಂದ ಆಲಿಂಗನಕೊಟ್ಟು) ಪ್ರಿಯಸಖೀ ಬಾ, ಮೊದಲು ಕುಳಿತು ಕೊಳ್ಳೋಣ; ನಿನ್ನ ಸಂಗಡ ಬಹಳ ಸಂಗತಿಗಳ ವಿಷಯವಾಗಿ ಮಾತಾಡ ತಕ್ಕದ್ದದೆ.

ಮಹಾಶ್ವೇತೆ:—ಇರಲಿ, ಮೊದಲು ನಿನ್ನ ವಸಂತಮಂದಿರಕ್ಕೆ ಹೋಗೋಣ ನಡೆ.

ಕಾದಂಬರಿ:—ಇಷ್ಟು ಅವಸರವೇಕೆ?

ಮಹಾ:—ನಿನ್ನ ದರ್ಶನಕ್ಕೋಸ್ಕರ ಅತಿಥಿಗಳು ಬರತಕ್ಕವರಿದ್ದಾರೆ.

ಕಾದಂಬರಿ:—ಯಾವ ಅತಿಥಿಗಳು?

ಮಹಾಶ್ವೇತೆ:—(ಕಿವಿಯಲ್ಲಿ ಏನೇನೋ ಹೇಳಿ, ಬಳಿಕ ಪ್ರಕಾಶವಾಗಿ) ಅವರು ತರಲಿಕೆಯಸಂಗಡ ಇನ್ನು ತುಸುಹೊತ್ತಿನಲ್ಲಿಯೇ ಬರುವರು; ಆದ್ದರಿಂದ ಹೋಗೋಣ ನಡೆ. (ಹೋಗುವರು)

---

## ಏಳನೆಯ ಪ್ರವೇಶ.

—(-೬೦೩.)—

ಸ್ಥಳ:—ವಸಂತಮಂದಿರ.

(ಮಹಾಶ್ವೇತೆಯೂ ಕಾದಂಬರಿಯೂ ಕುಳಿತಿರುವರು; ದಾಸೀಜನರು ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿ ಕಾದಂಬರಿಯ ಸೇವೆಮಾಡುತ್ತ ನಿಂತಿರುವರು; ಮಹಾಶ್ವೇತೆಯು ಕಾದಂಬರಿಗೆ ಕಿವಿಮಾತು ಹೇಳುತ್ತಿರುವಳು)

ತರಲಿಕೆ:—[ಪ್ರವೇಶಿಸಿ] ಮಹಾರಾಜರೇ ಇದೇ ದೇವಿಯುಮಂದಿರವು.

ಚಂದ್ರಾಪೀಡ:—(ತುಸು ಮುಂದಕ್ಕೆ ಬಂದು ನೋಡಿ)ಶಿವ ಶಿವ! ಬುದ್ಧಿಯು ಭ್ರಂಶವಾಯಿತು.

||ಪದ|| ರಾಗ—ಬೆಹಾಗ, ತಾಳ—ರೂಪ.

ಬೆರಗಾದೆನಿಂದು ನಾಂ ||ಪ||
ವರರೂಪವನೋಡಿ ||ಅ.ಪ||
ಸರಿಯಲ್ಲದೀಪರಿ | ಸರಸಾಗಿತೋರುವ ||
ಪರತರವೆನಿಸಿಹ| ಚಾರುನಾರಿಯನ್ನು ಕಂಡು ||೧||

ಅಹಹ! ಬ್ರಹ್ಮದೇವಾ ಇದೇನು ತಪ್ಪು ಮಾಡಿದೆ! ನನ್ನ ಶರಿರವನ್ನೆಲ್ಲ ನೇತ್ರ ಮಯವಾಗಿಯೇ ಯಾಕೆ ಮಾಡಲಿಲ್ಲ! ಈ ಸುಂದರಿಯ ರೂಪನೋಡುವ ಕೆಲಸವು, ನನ್ನ ಈ ಎರಡೇಕಣ್ಣುಗಳಿಂದ ನೀಗದು; ದೇವಾ, ಇದನ್ನುಂಟು ಮಾಡಬೇಕಾದರೆ ಎಷ್ಟು ಶ್ರಮಬಟ್ಟೆ? ಛೇ ಛೇ ಈ ಮೂರ್ತಿಯು ನಿನ್ನಿಂದಾದದ್ದಲ್ಲ; ನಿನ್ನ ಗುರುಗಳ ಕೈಯಿಂದಾದದ್ದಿರಲಿಕ್ಕೆ ಬೇಕು! ಶಾಬಾಸ್ ಚಂದ್ರಾಪೀಡಾ, ಧನ್ಯ ಧನ್ಯ ಇಂದಿಗೆ ನೀನೇ ಧನ್ಯ!

ತರಲಿಕೆ:—[ಮಹಾಶ್ವೇತೆಯ ಕಡೆಗೆ ನೋಡಿ] ದೇವಿಯುವರೇ, ಇಗೋ ನೋಡಿರಿ ಚಂದ್ರಾಪೀಡ ಮಹಾರಾಜರು ಬಂದಿರುವರು.

ಮಹಾಶ್ವೇತಾ-ಕಾದಂಬರಿ:—[ಇಬ್ಬರೂ ಅವಸರದಿಂದ ಎದ್ದು ಒಬ್ಬರಿಗೊಬ್ಬರು ಆಶ್ಚರ್ಯದಿಂದ ನೋಡುತ್ತ ನಿಂತುಕೊಳ್ಳುವರು]

ಮಹಾ:—ಸಖೀ ಕಾದಂಬರಿ, ಅತಿಥಿಗಳನ್ನಾದರಿಸತಕ್ಕದ್ದು ನಿನಗೆ ಯೋಗ್ಯವಲ್ಲವೇನು? ಹೀಗೇಕೆ ಸುಮ್ಮನೆ ನಿಂತುಕೊಂಡೆ? ಬರ್ರಿ, ಕುಳಿತು ಕೊಳ್ಳಿರಿ, ಎಂಬ ನುಡಿಗಳೊಂದಿಗೆ ಆಸನವನ್ನು ತೋರಿಸುತ್ತ ಆದರಿಸು. [ತನ್ನಲ್ಲಿ]ಇವಳ ಮೈಮೇಲೆ ಸ್ಮೃತಿಯೇ ಇದ್ದಂತೆ ತೋರುವದಿಲ್ಲ. [ಪ್ರಕಾಶವಾಗಿ]ಭಾಗ್ಯಶಾಲಿಯೇ, ಇತ್ತ ಬಾ, ಇವಳೇ ನನ್ನ ಸಖೀಕಾದಂಬರಿಯು.

ಚಂದ್ರಾ:—ದೇವೀ ಕಾದಂಬರೀ ಭಗವತೀ ಮಹಾಶ್ವೇತೆ, ನಿಮ್ಮ

ವರಿಗೂ ಈ ದೀನ ಚಂದ್ರಾಪೀಡನು ವಂದಿಸುವನು.

ಮಹಾ:—ರಾಜಪುತ್ರನೆ ಇತ್ತ ಬಾ, ಈ ಸುವರ್ಣಾಸನದ ಮೇಲೆ ಕುಳಿತುಕೋ; (ಕಾದಂಬರಿಗೆ ಮೆಲ್ಲಗೆ) ಈಗ ಈ ನೃಪಶ್ರೇಷ್ಠನಿಗೆ ನಮಸ್ಕಾರವನ್ನಾದರೂ ಮಾಡು; ಮಾತಾಡಿಸದಿದ್ದರಷ್ಟೇ ಹೋಯಿತು.

ಕಾದಂಬರಿ:—(ನಾಚುತ್ತ ನಾಚುತ್ತ ಅಸ್ಪಷ್ಟ ಶಬ್ದಗಳೊಂದಿಗೆ ನಮಸ್ಕರಿಸುವಳು.)

ಚಂದ್ರಾ:—ಛೇ ಛೇ ಬೇಡ ಬೇಡ ನನಗೇತಕ್ಕೆ ಇಷ್ಟು ಮರ್ಯಾದೆಯು? ದೇವಿಯುವರೇ ಆಸನದ ಮೇಲೆ ಕೂಡ್ರತಕ್ಕದ್ದು.

ಮಹಾ:—ಭಾಗ್ಯಶಾಲಿಯೇ, ನೀನು ಮೊದಲು ಆಸನವನ್ನಲಂಕರಿಸು, ಆ ಮೇಲೆ ಅವಳು ಕೂಡ್ರುವಳು. (ಎಲ್ಲರೂ ಕೂಡ್ರುವರು)

ಕಾದಂಬರಿ:—(ತನ್ನಲ್ಲಿ)

||ಪದ|| ("ಬಿಜನೆಗೆಲನಬನ್‌ಸೇ ಆಯಿಾ" ಎಂಬಂತೆ)

ಮನದೆಭ್ರಾಂತಿಸಿದೆನುನಾಂ ನಿಜದೆ ||ಪ||
ಭಾನುಸಮಾನವಿರಾಜಿಪನಿವಗೆ ||ಅ. ಪ.||
ನೃಪಾಲಪ್ರವೀರಂ ತರುಣಂ ಸುಧೀರಂ ||
ರೂಪದೆ ಮಾರನಲಜ್ಜಿಸಗಿವಗೆ ||೧||

ಚಂದ್ರಾ:—(ನಾಲ್ಕೂ ಕಡೆಗೆ ನೋಡುತ್ತ ತನ್ನಲ್ಲಿ) ಅರರೆ! ಇದೇನು? ಈ ಮಂದಿರದಲ್ಲಿ ಎತ್ತ ನೋಡಿದತ್ತ ಕಾದಂಬರಿಯೇ ಕಾಣಿಸುತ್ತಿರುವಳಲ್ಲ! ಇದೇನಗಾಧವಿರಬಹುದು! (ಸುತ್ತಲೂ ಚನ್ನಾಗಿ ನೋಡಿ) ನಿಜ! ನವರತ್ನಖಚಿತವಾದ ಈ ಮಂದಿರದಲ್ಲೆಲ್ಲ ಈ ಸುಂದರಿಯು ರೂಪವು ಪ್ರತಿಬಿಂಬಿಸಿರುವದು!!

ಕಾದಂಬರಿ:—(ತನ್ನಲ್ಲಿ) ಮಹಾಶ್ವೇತೆಯು ತರಲಿಕೆಯ ಸಂಗಡ ಅಪ್ಪಣೆ ಕಳಿಸಿದ್ದೇನೋ ನಿಜ, ಆದರೆ ಮಾಡುವದೇನು? ಆ ನಿರೂಪವು ನನಗೆ ಮುಟ್ಟುವದಕ್ಕಿಂತ ಮೊದಲೇ ಈ ದಿವ್ಯ ರಾಜಪುತ್ರನ ದರ್ಶನ

ವಾಗಿದ್ದರೆ ಬಹಳ ಒಳಿತಾಗುತ್ತಿತ್ತು.

ಚಂದ್ರಾ:—(ತನ್ನಲ್ಲಿ) ಕಟ್ಟಕಡೆಗೆ ಈ ಸುಂದರಿಯ ರೂಪವು ನನ್ನಲ್ಲಿಯೂ ಪ್ರತಿಬಿಂಬಿಸಿತು!

ಮಹಾ:—ಸಖೀ ಕಾದಂಬರೀ, ಈ ಮಹಾಪುರುಷನ ವೃತ್ತಾಂತವನ್ನು ನಿನಗೆ ಈ ಮೊದಲೇ ತಿಳಿಸಿರುವೆನು. ಸರ್ವಸಂಗಪರಿತ್ಯಾಗಮಾಡಿದಂಥ ನಾನು ಇವನ ಸ್ವಭಾವಕ್ಕೆ ಮೆಚ್ಚಿ, ಬಂಧುವಿನಂತೆ ಎಣಿಸಿ ನಿನ್ನ ಈ ರಾಜಧಾನಿಗೆ ಕರೆತಂದಿರುವೆನು. ಅಂದಮೇಲೆ ನನ್ನ ವಿಷಯವಾಗಿ ನೀನು ಯಾವ ತರದ ಪ್ರೇಮಭಾವವನ್ನು ತೋರಿಸುತ್ತಿರುವೆಯೋ ಅದೇ ತರದ ಪ್ರೇಮಭಾವವನ್ನು ಇವನ ವಿಷಯವಾಗಿ ವ್ಯಕ್ತಪಡಿಸುತ್ತಿರಲಿಕ್ಕೆ ಬೇಕು. ಹೆಚ್ಚಿಗೆ ಹೇಳುವದೇನು?

ಕಾದಂಬರಿ:—ಈ ಮಾತಿನ ವಿಷಯವಾಗಿ ಹೇಳಲಿಕ್ಕೇ ಬೇಡ! ನಿನ್ನ ಪ್ರೀತಿಗೆ ಪಾತ್ರನಾದವನು ನನ್ನ ಪ್ರೀತಿಗೂ ಪಾತ್ರನು!

ಮಹಾ:—(ತನ್ನಲ್ಲಿ) ನನಗಾದರೂ ಇದೇ ಬೇಕಾಗಿತ್ತು. (ಪ್ರಕಾಶವಾಗಿ) ಭಾಗ್ಯಶಾಲಿಯಾದ ರಾಜಪುತ್ರನೇ, ನನಗೂ ಇವಳಿಗೂ ಯಾವ ತರದ ಸಂಬಂಧವಿರುತ್ತದೆಂಬದು ನಿನಗೆ ಗೊತ್ತೇ ಅದೆ. (ಕಾದಂಬರಿಯ ಕಡೆಗೆ ನೋಡಿ ನಗುತ್ತ) ಹೆಚ್ಚು ಅನುಭವವಿಲ್ಲದ್ದರಿಂದ ಇವಳ ಸ್ವಭಾವದಲ್ಲಿ ಹಟಮಾರಿತನವು ವ್ಯಕ್ತವಾಗುತ್ತದೆ; ಇಷ್ಟೇ ಮತ್ತೇನೂ ಇಲ್ಲ.

ಚಂದ್ರಾ:—ಪ್ರೇಮದ ಮನುಷ್ಯನ ಹತ್ತರ ತುಸು ಹಟಮಾರಿತನವನ್ನು ತೋರಿಸುವದು ಉಪವರ ಕನ್ಯೆಗೆ ಭೂಷಣವಾದದ್ದೇ ಇರುತ್ತದೆ.

ಮಹಾ:—ಹಾಗಾದರೇನೂ ವ್ಯತ್ಯಯವಿಲ್ಲ. ಅದಿರಲಿ, ನಾನು ಹೇಳಿದಂತೆ ಈ ಗಂಧರ್ವಲೋಕವು ದರ್ಶನೀಯವಾಗಿರುವದೋ ಇಲ್ಲವೋ?

ಚಂದ್ರಾ:—ಇದನ್ನು ವಿಚಾರಿಸಲಿಕ್ಕೇಕೆ ಬೇಕು! ಈ ಗಂಧರ್ವಲೋಕವೆಂದರೆ ಜಗತ್ರಯದೊಳಗಿನ ಮೋಹಕ ವಸ್ತುಗಳ ಸಂಗ್ರಹವೇ ಸರಿ! ಈ ವಿಷಯವಾಗಿ ನಾನು ನಿನಗೆ ಜನ್ಮ-ಜನ್ಮಾಂತರದಲ್ಲಿಯೂ ಋಣಿ

ಯಾಗಿರುವೆನು.

ಮಹಾ:—ರಾಜಪುತ್ರನೆ, ಇಷ್ಟೊಂದು ಹೊಗಳಲಿಕ್ಕೆ ನನ್ನಿಂದ ನಿನಗೆ ಆಗಿರುವ ಉಪಕಾರವಾದರೂ ಏನು?

ಚಂದ್ರಾ:—ತ್ರಿಲೋಕಸುಂದರಿಯಾದ ನಿನ್ನ ಈ ಸಖೀ ಕಾದಂಬರೀದೇವಿಯು ದರ್ಶನಮಾಡಿಸಿದೆಯಲ್ಲವೇ? ಇದೇ ಮಹದುಪಕಾರವು.

ಕಾದಂಬರಿ:—ಸಖೀ ಮಹಾಶ್ವೇತೆ, ಕಂಡದ್ದನ್ನು ಪ್ರಶಂಶಿಸುವದು ದೊಡ್ಡವರ ನೈಸರ್ಗಿಕ ಗುಣವಿರಬಹುದೇನು?

ಚಂದ್ರಾ:—(ಮುಗುಳು ನಗೆಯಿಂದ ತನ್ನಲ್ಲಿ) ಏನೋ ಸ್ವಲ್ಪ ಶುಭಚಿಹ್ನವು ಕಾಣುತ್ತದೆ. (ಪ್ರಕಾಶವಾಗಿ) ಸಾಧ್ವೀಮಣೀ ಮಹಾಶ್ವೇತೆ, ದೊಡ್ಡವರು ಪಾತ್ರಾಪಾತ್ರಗಳ ವಿಚಾರಮಾಡಿ ಯೋಗ್ಯವಾದದ್ದನ್ನೇ ಪ್ರಶಂಶಿಸುವರು.

ಮಹಾ:—ನಿಜ!

(ಇಷ್ಟರಲ್ಲಿ ಒಬ್ಬ ವೃದ್ಧ ಕಂಚುಕಿ ಬರುವನು.)

ಕಂಚುಕಿ:—ದೇವೀ ಮಹಾಶ್ವೇತೆ, ಮಹಾರಾಜರೂ ಮಹಾರಾಣಿಯವರೂ ತಮ್ಮನ್ನು ಕರೆದುಕೊಂಡು ಬರಬೇಕೆಂದು ಆಜ್ಞಾಪಿಸಿರುವರು.

ಮಹಾ:—ಹೀಗೇನು? ಒಳ್ಳೇದು ಬಂದಳೆಂದು ಹೇಳು.

ಕಂಚುಕಿ:—ಅಪ್ಪಣೆ. (ಹೋಗುವನು)

ಮಹಾ:—ಸಖೀ ಕಾದಂಬರೀ, "ಕಾದಂಬರಿಗೆ ಉಪದೇಶಿಸಿದ್ದರ ಪರಿಣಾಮವೇನಾಯಿತು?" ಎಂದು ನಿನ್ನ ತಾಯಿ-ತಂದೆಗಳು ನನ್ನನ್ನು ಕೇಳಿದರೆ ಅವರಿಗೇನು ಹೇಳಲಿ?

ಕಾದಂಬರಿ:—(ನಸುನಕ್ಕು) ನಾನೇನು ಹೇಳಲಿ! ನಿನಗೆ ಸರಿದೋರಿದಂತೆ ಹೇಳು. ಆದಿರಲಿ, ಮೊದಲು ಈ ತಾಂಬೂಲ ತೆಗೆದುಕೋ. (ಎಂದು ತಾಂಬೂಲ ಕೊಡಹೋಗುವಳು.)

ಮಹಾ:—ಸರ್ವಸಂಗ ಪರಿತ್ಯಾಗಮಾಡಿದ ನನ್ನಂಥ ತಪಸ್ವಿನಿಗೆ

ಇದು ಯಾತಕ್ಕೆ ಬೇಕು? ನಾವೆಲ್ಲರೂ ಕೂಡಿ ಈ ಅತಿಥಿಯನ್ನು ಸತ್ಕರಿಸುವದು ಯೋಗ್ಯವು; ಆದದ್ದರಿಂದ ಇದನ್ನು ಅವನಿಗೆ ಕೊಡು—ಏಳು.

ಕಾದಂಬರಿ:—(ನಾಚಿ) ನನ್ನಿಂದಾಗದು ನಾನೊಲ್ಲೆ!

ಮಹಾ:—ಒಲ್ಲೆನೆನ್ನಲಿಕ್ಕೇನಾಯಿತು? ಇವನು ಅನ್ಯನೆಂದು ಭಾವಿಸಲಾಗದೆಂದು ಈ ಮೊದಲೇ ಹೇಳಿಲ್ಲವೇನು? ಹೂ ಬೇಗ ಕೊಡು; ಇಲ್ಲದಿದ್ದರೆ ಅವನು ಮನಸ್ಸಿನಲ್ಲಿ ಏನಾದರೂ ತಿಳಕೊಳ್ಳಲಿಕ್ಕಿಲ್ಲವೇನು? ನೀನೇ ತಿಳಿದು ನೋಡು.

ಕಾದಂಬರಿ:—||ಪದ||ರಾಗ-ಧೀರಶಂಕರಾಭರಣ, (ಮಿಶ್ರ)ತಾಳ-ದಾದರ.

ತಾಂಬೂಲವನಾನೀಯುವೆನು ||ಪ||

ಬಾ ತರುಣಾ ಮೋದದಿ ||ಅ. ಪ || ನಾನೀಯುವೆನು-

[ಲಜ್ಜೆಯಿಂದ ನಾಚಿ ಹಿಂದಕ್ಕೆ ಸರಿದು ಮಹಾಶ್ವೇತೆಗೆ]

ಪರಿಚಿತನಿವತಾನಲ್ಲವು ಲಜ್ಜೆ ಒಪ್ಪದೆ! ||

ಭರದೆ ಸಖೀನೀ ನೀವುದಾ ||೧|| ಮೋದದಿ—

ಮಹಾ:—[ನಕ್ಕು ದೊಡ್ಡಧ್ವನಿಯಿಂದ] ನಾನೇತಕ್ಕೆ ಕೊಡಲಿ! ನಾನು ಕೊಡಲಿಕ್ಕೆ ನನ್ನ ಅಂತಃಪುರಕ್ಕೆ ಬಂದಿರುವನೇನು?

ಕಾದಂಬರಿ:—ಅವ್ವಾ ಕೊಡುವೆನೆ, ಮೆಲ್ಲಗೆ ಮಾತಾಡು [ವಿಡಾ ತೆಗೆದುಕೊಂಡು ಏಳುವಳು ಹಾಗೂ ಸುಮ್ಮನೆ ನಿಲ್ಲುವಳು.]

ಮಹಾ:—ಹೂ ಕೊಡು.

ಕಾದಂಬರಿ:—[ತನ್ನಲ್ಲಿ] ಮನ್ಮಥಾ ನನಗೆ ತಿಳಿಯದಂತೆ ಈ ಕುಮಾರಸಮೇತನಾಗಿ ನನ್ನ ಮನಸ್ಸಿನಲ್ಲಿ ನೆಲೆಸಿ, ಈ ಪ್ರಕಾರವಾಗಿ ಮಾತಾಡಲಿಕ್ಕೆ ಕಲಿಸುವೆಯಾ?

||ಪದ|| ("ಶಾಂತಿಧರಾ ನೃಪರಾಜಶೋಕಾ" ಎಂಬಂತೆ)

ಶಾಂತಿಯುತಾಕೃಪೆಮಾಡು ರಾಜಾಸ್ವೀಕರಿಸೀದಾಸಿಯ ||ಪ||

ಸಂತಸದಿಂ ಧೀರ ||ಅ. ಪ.|| ರಾಜಾ—

ಘರ್ಮಜಲಸಮೇತಂ | ಆತ್ಮಾರ್ಪಣವಮಾಳ್ಪಂ ||
ಧರ್ಮದಿಂ ನೀಡುವೆ ತ್ವತ್ಕರದೊಳು |
ಶುಭಲಗ್ನವಿದೆಂದರಿಸುಕುಮಾರಾ ||೧|| ಸ್ವೀಕರಿ—

[ನಾಚುತ್ತ ನಾಚುತ್ತ ಮುಂದಕ್ಕೆ ಸರಿದು ದೃಷ್ಟಿಗೆ ದೃಷ್ಟಿಯನ್ನು ಹಚ್ಚಿ ತಾಂಬೂಲವನ್ನು ಮುಂದಕ್ಕೆ ಮಾಡುವಳು.]

ಚಂದ್ರಾ:—(ನೋಡಿ ತನ್ನಲ್ಲಿ) ಈಗ ನಾನು ಕೃತಾರ್ಥನಾದೆನು. ತಾಂಬೂಲಕ್ಕೆ ಕೈಹಚ್ಚಿ (ತನ್ನಲ್ಲಿ) ಅಹಹ!

||ಸಾಕಿ||

ಸುಂದರಿಯ ಲಲಿತಕರಕಮಲದೊಳಿಹ ತಾಂಬೂಲವುತಾಂಸಾಜಂ||
ಅಂದದೆಯಿವಳತ್ಯನುರಾಗವ ನೆರೆ ಸೂಚಿಸುತಿರ್ಪುದು ನೈಜಂ ||
ನಂದವ ಪೊಂದಿದೆ ನಾಂ || ಇಂದುವದನೆ ಲಜ್ಜಿಪಳಂದಂ ||೧||

ಅಹಹ! ಇವಳ ಕರಸ್ಪರ್ಶವೋ ಆನಂದವೊ? ಅಮೃತವೋ ಅಥವಾ ಚಂದ್ರಿಕೆಯೊ? ಏನೂ ತಿಳಿಯಲೊಲ್ಲದು. ಎಲೈ ಕರಸಂಯೋಗವಮಾಡ ತಕ್ಕ ತಾಂಬೂಲವೇ, ಇನ್ನೂ ತುಸು ಹೊತ್ತು ಹೀಗೇ ಇರು.

ಮಹಾ:—ಎಲೇ ಏ ಭ್ರಮಿಷ್ಠೆ, ಅವನಿಗೆ ತಾಂಬೂಲ ಕೊಡು; ಸುಮ್ಮನೆ ಕೈಚಾಚಿಕೊಂಡು ಯಾಕೆ ನಿಂತಿರುವೆ?

ಕಾದಂಬರಿ:—(ತಾಂಬೂಲ ಕೊಟ್ಟು ಸುಮ್ಮನೆ ನಿಲ್ಲುವಳು.)

ಮಹಾ:—ರಾಜಪುತ್ರನೆ, ನಿನಗೆ ಸ್ನಾನದ ಹೊತ್ತಾಯಿತಲ್ಲವೆ?

ಚಂದ್ರಾ:—ಹೌದು, ಇಂದಿನ ನವಯೌವನೋತ್ಸವದಲ್ಲಿ ನನಗೆ ಸ್ನಾನದ ಸ್ಮರಣೆಯೇ ಇಲ್ಲ!

ಮಹಾ:—ಸಖೀ ಕಾದಂಬರಿ ಈ ರಾಜಪುತ್ರನು ವಾಸಿಸುವದ ಕ್ಕಾಗಿ ಯಾವ ಸ್ಥಳವನ್ನು ಏರ್ಪಡಿಸಿರುವಿ?

ಕಾದಂ:—(ತನ್ನಲ್ಲಿ) ನನ್ನ ಮನೋಮಂದಿರದಲ್ಲಿಯೇ ವಾಸಗೊಂಡಿರುತ್ತಿರಲಿಕ್ಕೆ ಎರಡನೇ ಸ್ಥಳದ ವಿಚಾರವೇತಕ್ಕೆ? (ಪ್ರಕಾಶವಾಗಿ) ಸಖೀ

ಇದನ್ನೇನು ವಿಚಾರಿಸುವಿ? ನನ್ನ ಅಂತಃಕರುಣ..............(ಲಜ್ಜೆಯಿಂದ ಸುಮ್ಮನಿರುವಳು.)

ಮಹಾ:—ಹೇಳು ಹೇಳು ನಾಚಿಕೊಳ್ಳುವದೇತಕ್ಕೆ?

ಕಾದಂಬರಿ:—ಇಲ್ಲ ಇಲ್ಲ ನಾನೇತಕ್ಕೆ ನಾಚಿಕೊಳ್ಳಲಿ?

ಮಹಾ:—ಹೇಳು ಹಾಗಾದರೆ, "ನನ್ನ ಅಂತಃಕರುಣ" ಎಂದು ಏನೇನೋ ಹೇಳುತ್ತಿದ್ದೆಯಲ್ಲ?

ಕಾದಂಬರಿ:—ಹಾಗೆಲ್ಲಿ ಅಂದೆನೆ! ನನ್ನ ಅಂತಃಪುರವೆಲ್ಲ ಈ ರಾಜಪುತ್ರನದೇ ಇರುತ್ತದೆಂದು ಹೇಳುವವಳಿದ್ದೆನು.

ಮಹಾ:—ಒಳ್ಳೇದು ಮುಂದೆ?

ಕಾದಂ:—ಅಂತಃಪುರದಲ್ಲಿಯಾಗಲಿ, ಕ್ರೀಡಾಪರ್ವತದ ಮೇಲಿನ ಮಣಿಮಂದಿರದಲ್ಲಿಯಾಗಲಿ ವಾಸಿಸಲಿ.

ಮಹಾ:—ಇವೆರಡರೊಳಗೆ ಯಾವದರಲ್ಲಿ ವಾಸಮಾಡಬೇಕೆಂದು ಹೇಳುವಿ?

ಕಾದಂ:—ನಿನ್ನ ಮನಸ್ಸಿಗೆ ಯಾವದು ಹೆಚ್ಚು ರಮ್ಯವಾಗಿ ತೋರುವದೋ ಅಲ್ಲಿ ವಾಸಿಸಲಿಕ್ಕೆ ತಿಳಿಸು.

ಮಹಾ:—ಚಂದ್ರಾಪೀಡಾ, ನೀನು ಮಣಿಮಂದಿರಕ್ಕೆ ಹೋಗಿ ಸ್ವಲ್ಪ ವಿಶ್ರಾಂತಿ ತೆಗೆದುಕೋ; ನಾನು ಮದಿರಾದೇವಿಯು ಕಡೆಗೆ ಹೋಗಿ ತುಸು ಹೊತ್ತಿನಲ್ಲಿಯೇ ಬರುವೆನು. ಕೇಯೂರಕಾ ಈ ರಾಜಪುತ್ರನ ಸಂಗಡ ಹೋಗು, ಹಾಗು ಇವನ ಸೇವೆಯಲ್ಲಿ ತತ್ಪರನಾಗಿರು.

ಕೇಯೂರಕ:—ಅಪ್ಪಣೆ, ಮಹಾರಾಜರೇ ಇತ್ತ ಕಡೆಗೆ ಬರಬೇಕು.

ಚಂದ್ರಾ:—ಸಾಧ್ವೀಮಣೀ ಮಹಾಶ್ವೇತೆ, ನಮಸ್ಕರಿಸುವೆನು; ದೇವೀ ಕಾದಂಬರೀ ಬರುವೆನು.

ಕಾದಂ:—(ಸ್ವಲ್ಪನಕ್ಕು ಮುಖವನ್ನು ತಿರುಗಿಸುವಳು.)

ಚಂದ್ರಾ:—(ನೋಡಿ ಕಣ್ಣಲ್ಲಿ) ಅಹಹ!

||ಸಾಕಿ||

ಈ ಸುಂದರಿಯುಸುಮಧುರಸ್ಮಿತಮಂದೃಷ್ಟಿಯುಮಂಸ್ಥಿತಿಯುನ್ನು ||
ಭಾಸುರವಾಣೀಸ್ಥಲಮುಮಂವರಕರಕಮಲದಸೋಂಕನ್ನು ||
ಸಾಸದೆನೆರೆಕಂಡೆಂ ||ಎಸಕದೆನಾಂನಸುವೆರ್ದೆಗೊಂಡೆಂ ||೧||

(ಹೋಗುವನು.)

ಮಹಾ:—ಒಳ್ಳೇದು ಸಖೀ ನಾನೂ ಹೋಗಿಬರುವೆನು.

ಕಾದಂ:—ಬೇಗ ಬಾ, ಇಂದು ನನಗೆ ಸ್ವಸ್ಥವಿಲ್ಲ. ಯಾಕೋ ಬಹು ತ್ರಾಸವಾಗಿದೆ.

ಮಹಾ:—(ನಗುತ್ತ ತನ್ನಲ್ಲಿ) ಹ್ಯಾಗೆ ಸ್ವಸ್ಥವಿದ್ದೀತು? ಈ ವೇಳೆಯಲ್ಲಿ ಹೀಗೆ ಆಗತಕ್ಕದ್ದೇ ಸರಿ. (ಪ್ರಕಾಶವಾಗಿ) ಸ್ವಲ್ಪ ಹೊತ್ತಿನಲ್ಲಿಯೇ ಬರುವೆನು. (ಹೋಗುವಳು.)

ಕಾದಂಬರಿ:—(ತನ್ನಲ್ಲಿ) ಎಲೆ ಮನಸ್ಸೇ, ಚಿಂತಿಸಬೇಡ; ಮಹಾಶ್ವೇತೆಯ ಸಹಾಯದಿಂದ ನಿನ್ನ ಇಚ್ಛೆಯು ಪೂರ್ಣವಾಗಬಹುದು.(ಪ್ರಕಾಶವಾಗಿ) ಸಖೀ ಮದಲೇಖೆ, ಅರಮನೆಯ ಕಡೆಗೆ ಹೋಗೋಣ ನಡೆ.

ಮದಲೇಖೆ:—(ನಸುನಕ್ಕು) ಹೌದು ನಡೆ, ಅಲ್ಲಿ ಕುಳಿತು ನೋಡಿದರೆ ಆ ರಾಜಪುತ್ರನಿರತಕ್ಕ ಮಣಿಮಂದಿರದ ಶೋಭೆಯು ಬಹು ಚನ್ನಾಗಿ ಕಾಣುವದು.

ಕಾದಂಬರಿ:—(ತನ್ನಲ್ಲಿ)

||ಪದ|| ("ಅಜುನಿ ಮಜವರಿ" ಎಂಬಂತೆ.)

ಮಾರಸಮ ವರರಾಜಸುತನವ ತೋರಿ ಮುಖವನು ಸಾರಿದಂ ||
ಬೀರುತಮೋಹವನೆನ್ನಯಮನಸಿನ ನಿಶ್ಚಯವಚನವನೀಗಿದಂ ||೧||

(ಇಬ್ಬರೂ ಹೋಗುವರು.)

---

# ಎಂಟನೆಯ ಪ್ರವೇಶ.

(ಸ್ಥಳ:—ಕ್ರೀಡಾಪರ್ವತದ ಮೇಲಿನ ಮಣಿಮಂದಿರ)

ಚಂದ್ರಾ:—[ಚಿಂತೆಯೊಡನೆ ಪ್ರವೇಶಿಸಿ]

||ಕಂದ|| ವರಯೌವನಮದವಿದುಸಲೆ |
ತರುಣರ್ಕಳ ಮಂದಮತಿಗಳಂ ಮಾಳ್ಪುದು ತಾಂ ||
ದೊರೆವುದು ಸಹಜದಿಮಾದೊಡೆ |
ತರುಣೀಜನದಮಿತ ಮಹಿಮೆ ದೊರೆವುದು ಕಠಿಣಂ ||೧||

ಒಳ್ಳೇದು, ಇಲ್ಲಿಗೆ ಬಂದ ದಿವಸವೇ ಕೇಯೂರಕನನ್ನು ಮಹಾಶ್ವೇತೆಯ ಆಶ್ರಮಕ್ಕೆ ಕಳುಹಿದೆನು. ಅವನು ಈವರೆಗೂ ಯಾಕೆ ಬಂದಿರಲಿಕ್ಕಿಲ್ಲ?

ದಾಸಿ:—(ಪ್ರವೇಶಿಸಿ) ಮಹಾರಾಜರೇ, ತಾವು ನಿನ್ನಿನಿಂದ ಯಾವನ ಹಾದಿಯನ್ನು ನೋಡುತ್ತಿದ್ದರೋ ಅವನೇ ಈಗ ಬಂದನು.

ಚಂದ್ರಾ:—ಯಾರು? ಕೇಯೂರಕನು ಬಂದನೇ?

ದಾಸಿ:—ಹೌದು ಮಹನ್.

ಚಂದ್ರಾ:—ಎಲ್ಲಿ? ಎಲ್ಲಿರುವನು ತೋರಿಸು? ಈಗ ಅವನ ಮಾರ್ಗವನ್ನೇ ನಿರೀಕ್ಷಿಸುತ್ತ ಕುಳಿತಿದ್ದೆನು.

ದಾಸಿ:—ಮಹಾರಾಜರೇ ಇತ್ತ ಕಡೆಗೆ ನೋಡಿರಿ, ಅವನ ಸಂಗಡ ಮತ್ತೊಬ್ಬ ಸ್ತ್ರೀಯೂ ಬರುತ್ತಿರುವಳು.

ಚಂದ್ರಾ:—ನಿಜ, ಅವಳು ಪತ್ರಲೇಖೆಯಾಗಿರಬಹುದು. [ಅವರಿಬ್ಬರೂ ದೂರದಿಂದ ಬರುವದನ್ನು ನೋಡಿ ಆನಂದಮುದ್ರೆಯಿಂದ] ಬಾ, ಬಾ ಕೇಯೂರಕಾ ಇತ್ತ ಬಾ, ಪತ್ರಲೇಖೇ, ಮಿತ್ರ ವೈಶಂಪಾಯನನು ಸೇನಾಸಮೇತನಾಗಿ ಕ್ಷೇಮದಿಂದಿರುವನೆ?

ಪತ್ರಲೇಖೆ:—ಹೌದು ಮಹಾರಾಜನೆ, ಎಲ್ಲರೂ ಕ್ಷೇಮದಿಂದಿರುವರು.

ಚಂದ್ರಾ:—ಕೇಯೂರಕಾ, ಮಹಾಶ್ವೇತೆಯು ಬಂದಳೇನು?

ಕೇಯೂರಕ:—ಮಹಾರಾಜನೆ, ಆವರ ಆಶ್ರಮದಿಂದ ಎಲ್ಲರೂ

ಕೂಡಿಯೇ ಬಂದೆವು; ಅವರು "ಕಾದಂಬರೀದೇವಿಯ ಹತ್ತಿರ ಹೋಗಿ ಬರುವೆವೆ"ಂದು ಹೇಳಿ ಹೋದರು.

ಚಂದ್ರಾ:—ಒಳ್ಳೇದು ಪತ್ರಲೇಖೇ, ನಿಮ್ಮೆಲ್ಲರಿಗೂ ನಾನಿದ್ದ ಸ್ಥಳವು ಹ್ಯಾಗೆ ಗೊತ್ತಾಯಿತು?

ಪತ್ರ:—ತಾವು ಅದೃಶ್ಯವಾದಂದಿನಿಂದ ನಾವೆಲ್ಲರೂ ಇಂದ್ರಾಯುಧನ ಹೆಜ್ಜೆವಿಡಿದು ತಮ್ಮನ್ನು ಹುಡುಕುತ್ತ ನಿನ್ನಿನ ದಿವಸ ಸಾಯಂಕಾಲಕ್ಕೆ ಅಚ್ಛೋದಸರೋವರಕ್ಕೆ ಬಂದೆವು. ಅಲ್ಲಿ ಕೇಯೂರಕನು ಭೆಟ್ಟಿಯಾಗಿ ತಾವು ಇಲ್ಲಿರುವ ಸಂಗತಿಯನ್ನು ತಿಳಿಸಿದನು.

ಚಂದ್ರಾ:—ಮಿತ್ರ ವೈಶಂಪಾಯನನು ನನ್ನನ್ನು ಹುಡುಕುವದಕ್ಕಾಗಿ ಬಹಳ ಜನರನ್ನು ಕಳಿಸಿರುವನೇನು?

ಪತ್ರ:—ಹೌದು ಮಹಾರಾಜರೆ, ನಾಲ್ಕೂ ಕಡೆಗೂ ಕಳಿಸಿರುವನು; ಮಹನ್ ಈ ಸಂಗತಿಯು ಒತ್ತಟ್ಟಿಗಿರಲಿ, ಇಗೋ ತೆಗೆದುಕೊಳ್ಳಿರಿ; ಉಜ್ಜಯಿನಿಯಿಂದ ತಮ್ಮ ತಂದೆಗಳವರು ಲೇಖಹಾರಕನ ಸಂಗಡ ಒಂದು ಕುಶಲ ಪತ್ರಿಕೆಯನ್ನು ಕಳಿಸಿರುವರು; ಮಹಾರಾಜರು ಮೊದಲು ಇದನ್ನು ಓದಬೇಕು. [ಕೊಡುವಳು.]

ಚಂದ್ರಾ:—(ಓದಿಕೊಂಡು ದುಃಖದಿಂದ) ಒಟ್ಟಿನಮೇಲೆ ಮಾಯೆಯೆಂಬದು ಬಹು ಕೆಟ್ಟದೆಂದು ಹೇಳುತ್ತಾರೆ; ಇದು ನಿಜ. ನನ್ನ ತಂದೆ ತಾಯಿಗಳು ನನ್ನ ವಿರಹದಿಂದ ದುಃಖಪಡುತ್ತಿರುವರು; ನನಗೆ ನೋಡಿದರೆ ಈ ಸುಂದರಿಯ ಮೇಲಿನ ಆಶೆಯಿಂದ ಅತ್ತಕಡೆಯ ಸ್ಮರಣೆಸಹ ಇಲ್ಲದಂತಾಯಿತು. ಇರಲಿ, ತಂದೆಯ ಅಪ್ಪಣೆಯು ಶಿರಸಾವಂದ್ಯವಾದದ್ದು. (ಪತ್ರಿಕೆಯನ್ನು ತಲೆಗೆಹಚ್ಚುವನು) ಈಗ ಹ್ಯಾಗಾದರೂ ಮಾಡಿ ಕಾದಂಬರಿಯ ಅಪ್ಪಣೆಯನ್ನು ತೆಗೆದುಕೊಳ್ಳಲಿಕ್ಕೆ ಬೇಕು. ಕೇಯೂರಕಾ, ನನ್ನನ್ನು ಕಾದಂಬರೀದೇವಿಯ ಮಂದಿರದ ಕಡೆಗೆ ಕರೆದುಕೊಂಡು ನಡೆ.

ಕೇಯೂ:—ಮಹನ್ ಇತ್ತಲೀಮಾರ್ಗವಾಗಿ ದಯಮಾಡಬೇಕು.

(ಮುಂದಕ್ಕೆ ಹೋಗುವನು)

ಚಂದ್ರಾ:—(ತನ್ನಲ್ಲಿ) ಇತ್ತ ತಂದೆಯ ಆಜ್ಞೆ, ಇತ್ತ ಕಾದಂಬರಿಯ ಮೇಲಿನ ಲವಲವಿಕೆ; ಈ ವಿಷಯವಾಗಿ ತ್ರಿಶಂಕುವಿನಂತೆ ಅಂತರಾಳದಲ್ಲಿ ನಿಂತಿರುವೆನು. (ಹೋಗುವನು)

---

## ಹಿಂಬತ್ತನೆಯ ಪ್ರವೇಶ.

—:(-೦-):—

ಸ್ಥಳ:—ಉಪವನದೊಳಗಿನ ಹಿಮಗೃಹ.

(ಕಾದಂಬರಿ, ಮಹಾಶ್ವೇತೆ ಹಾಗೂ ಮದಲೇಖೆ, ಇವರು ಮಾತಾಡುತ್ತ ಕುಳಿತಿರುವರು)

ಕಾದಂಬರಿ:—ಸಖೀ ಈ ವಿಷಯವಾಗಿ ಇನ್ನು ಮೇಲೆ ನೀನು ನನಗೆ ಏನೂ ಹೇಳಲಿಕ್ಕೆ ಬರಬೇಡ. ನಾನು ಎಂದಿಗೂ ಕೇಳುವದಿಲ್ಲ; ಸುಮ್ಮನೆ ಯಾತಕ್ಕೆ ಉಪದೇಶ ಮಾಡುವೆ?

ಮಹಾಶ್ವೇತೆ:—ಒಳ್ಳೇದು, ನೀನು ಆ ರಾಜಪುತ್ರನಮೇಲೆ ಇಷ್ಟು ಸಿಟ್ಟಾಗಲಿಕ್ಕೆ ಕಾರಣವೇನು? ಅವನು ನಿನಗೆ ಮಾಡಿದ್ದಾದರೂ ಏನು?

ಕಾದಂಬರಿ:—ಆ ನೀಚನು ಮಾಡಿದ ಕೃತಿಯನ್ನು ಹೇಳಲಿಕ್ಕೆ ಸಹ ನನಗೆ ನಾಚಿಕೆ ಬರುತ್ತದೆ. ಇದೇ ಏನು ದೊಡ್ಡವರ ಲಕ್ಷಣವು?

ಮಹಾ:—ಅವನಿಂದ ಯಾವ ತಪ್ಪಿನ ಕೆಲಸವಾಗಿರುವದು?

ಕಾದಂಬರಿ:—ಗೆಳತೀ ಮಹಾಶ್ವೇತೆ, ತರುಣ ಪುರುಷರ ಮೇಲೆ ನಮ್ಮಂಥ ತರುಣಿಯರು ವಿಶ್ವಾಸವಿಡುವದು ಯೋಗ್ಯವಲ್ಲೆಂಬ ಸಂಗತಿಯು ಗೊತ್ತಿದ್ದರೂ, ನಿನ್ನ ಮಾತಿನ ಮೇಲೆ ನಂಬಿಗೆಯನ್ನಿಟ್ಟು ಅವನನ್ನು ನನ್ನ ಬಂಧುವಿನಂತೆ ಭಾವಿಸಿದ್ದೆನು; ಆದರೆ ಅದೆಲ್ಲ ವ್ಯರ್ಥವಾಗಿಹೋಯಿತು.

ಮಹಾ:—ಅವನಿಂದ ಆದ ದುಷ್ಕೃತಿಯನ್ನು ಹೇಳೆಂದರೆ ಏನೇನೋ ಬಡಬಡಿಸುವಿಯಲ್ಲ? ಮೊದಲು ಅದನ್ನು ಹೇಳು.

ಕಾದಂಬರಿ:—ಏನು ಹೇಳಲಿ, ನಾನು ನನ್ನ ಮಂದಿರದಲ್ಲಿ ಒಬ್ಬಳೇ

ಮಲಗಿರುವದನ್ನು ನೋಡಿ, ಮುಗುಳುನಗೆ ನಗುತ್ತ ಹತ್ತರ ಬಂದು, ಮುಂಗುರುಳುಗಳನ್ನು ತೀಡಿ ಗಲ್ಲವನ್ನು ಹಿಡಿದು ಚುಂಬಿಸಿದನು.

ಮದಲೇಖೆ:—[ತನ್ನಲ್ಲಿ] ಅವ್ವವ್ವಾ! ಏನು ಸುಳ್ಳಿಯೇ ನಮ್ಮವ್ವಾ ಇವಳು! (ಪ್ರಕಾಶವಾಗಿ) ಅವನೇನೋ ಉದ್ಧಟತನದಿಂದ ವರ್ತಿಸಿದನು. ಆ ಬಗೆಯ ದುಷ್ಕೃತಿಯನ್ನು ಮಾಡುವಾಗ ನೀನು ಹ್ಯಾಗೆ ಸುಮ್ಮನಿದ್ದೆ?

ಕಾದಂಬರಿ:—ಸುಮ್ಮನೇ ಯಾಕೆ ಇರಲಿ? ಬಾಯಿಗೆ ಬಂದಂತೆ ಅಂದೆನು; ನಾನು ಎಷ್ಟು ಬಿರುಸುಮಾತುಗಳನ್ನಾಡಿದರೂ ಅವನು ಸಿಟ್ಟಿಗೇಳದೆ ಬಹು ವಿನಯದಿಂದ ಮಾತಾಡಹತ್ತಿದನು; ಕಟ್ಟಕಡೆಗೆ ಮತ್ತಿಷ್ಟು ಕೋಪಗೊಂಡು ಸುಮ್ಮನೆ ಕುಳಿತೆನು. ಆಗಂತೂ ಪರಮ ವ್ಯಾಕುಲನಾಗಿ "ಪ್ರಿಯೆ, ನನ್ನ ಅಭಿಲಾಷೆಯನ್ನು ಪೂರ್ಣಮಾಡು" ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಇದಕ್ಕೂ ಹೆಚ್ಚಿಗೆ ಇನ್ನೇನು ಹೇಳಲಿ?

ಮದಲೇಖೆ:—ಸಖೀ ಕಾದಂಬರಿ, ಈ ವಿಷಯವಾಗಿ ನನಗೊಂದು ಸಂಶಯ ಬರುವದು.

ಕಾದಂಬರಿ:—ಅದೇನು?

ಮದಲೇಖೆ:—ಆ ರಾಜಪುತ್ರನು ಮಣಿಮಂದಿರದಲ್ಲಿ; ನಾವಿಬ್ಬರೂ ನಮ್ಮ ಮಂದಿರದಲ್ಲಿ. ನಾನಂತೂ ನಿನ್ನನ್ನು ಬಿಟ್ಟು ಅಗಲಿಲ್ಲ. ಹೀಗಿದ್ದು ಅವನು ಏನೇನೋ ಮಾಡಿದನೆಂದು ಹೇಳುವಿಯಲ್ಲ? ಅದೆಲ್ಲ ನನಗೇಕೆ ಕಾಣಿಸಲಿಲ್ಲ?

ಕಾದಂಬರಿ:—ಅಹಹ! ಇದೇ ಏನು ನಿನ್ನ ಸಂಶಯವು? ಬಹು ನಿಪುಣೆಯು, ಸ್ವಪ್ನದಲ್ಲಿ ಬಂದವನು ನಿನಗೆ ಹ್ಯಾಗೆ ಕಾಣಿಸಬೇಕು?

ಮಹಾ:—[ನಗುತ್ತ] ಹೆ ಹೆ ಈಗ ಮಾತ್ರ ಯಾವತ್ತೂ ತಿಳಿಯಿತು. ಈಗಾದರೂ ಸ್ವಪ್ನದಲ್ಲಿಯೇ ಇರುವೆಯೋ? ಎಚ್ಚರದಿಂದಿರುವೆಯೋ?

ಕಾದಂಬರಿ:—ನಿನ್ನ ಚೇಷ್ಟೆ ಇರಲಿ, ಅವನು ಸ್ವಪ್ನದಲ್ಲಿ ಬಂದಾದರೂ ಹೀಗೆ ಮಾಡಬೇಕೇನು?

ಮದ:—ಮಲಗುವಾಗ ನೀನು ಅವನ ಧ್ಯಾನದಲ್ಲಿಯೇ ಮಲಗಬೇಕೇನು? ಮನಸ್ಸಿನಲ್ಲಿ ಏನೇನೋ ಇಟ್ಟುಕೊಂಡು, "ನನ್ನ ದೇಹದಲ್ಲಿ ಹಾಗೆ ಆಗುತ್ತದೆ-ನನ್ನ ದೇಹದಲ್ಲಿ ಹೀಗೆ ಆಗು..............."

ಕಾದಂ:—[ನಡುವೇ ಬಾಯಿ ಹಾಕಿ] ಬಾಯಿಮುಚ್ಚು, ಮನಬಂದಂತೆ ಮಾತಾಡಬೇಡ.

ಮಹಾ:—ಎಲೇ ಮುಗ್ಧೇ, ಆ ಯುವರಾಜನ ಕಡೆಗೆ ಏನೂ ದೋಷವಿಲ್ಲ; ಇದೆಲ್ಲ ಆ ನೀಚ ಮನ್ಮಥನ ಚೇಷ್ಟೆಯು!

ಕಾದಂಬರಿ:—ಮೊನ್ನಿನಿಂದ ಯಾವಾಗಲೂ "ಮನ್ಮಥನ ತಾಪ ಮನ್ಮಥನ ಚೇಷ್ಟೆ" ಎಂದು ಹೇಳುವೆಯಲ್ಲ? ಆ ಮನ್ಮಥನಾದರೂ ಯಾರು?

ಮಹಾ:-ಪದ||("ವ್ಹಾ ತಾರಾ ಇತುಕಾ ನ ಅವಘೇ" ಎಂಬಂತೆ)

ದೇಹರಹಿತಾ ಕೇಳು ಗೆಳತೀ ಕಾಳ್ಗಿಚ್ಚಿಗೆ ಸಮನು ||ಪ||
ಜ್ವಾಲೆಯಿಲ್ಲದವನಾದೊಡಮವನರಿ ತರುಣಜನರ ತನುವಂ ||
ಲೀಲೆಯಿಂದವಶವಮಾಡಿಕೊಳ್ಳುತಲಿದಯವಿಲ್ಲದೆದಹಿಪಂ ||೧||
ಧೂಮವಿಲ್ಲದೊಡಮಾತನತಾಪದಿನಶ್ರುಗಳಿತಮಕ್ಕುಂ ||
ವಿಮಲಭಸಿತಮದುತೋರದಿದೊಡಂದೇಹವಸಿತಮಾಳ್ಪಂ ||೨||

ಸಖೀ ಹೆಚ್ಚಿಗೆ ಹೇಳುವದೇನು? ಇವನ ತಾಪದಿಂದ ಮುಕ್ತರಾದವರು ಈ ಮೂರು ಲೋಕಗಳಲ್ಲಿ ಯಾರೂ ಇಲ್ಲ; ನಿನ್ನ ಮೇಲೆ ಈ ಮನ್ಮಥನ ಛಾಯೆಯು ಇನ್ನೂ ಹೊಸದಾಗಿ ಬಿದ್ದಿರುವದು; ಇಷ್ಟಕ್ಕೇ ತೀರಲಿಲ್ಲ. ಅವನ ನಿಜವಾದ ಸ್ವರೂಪವು ಇನ್ನೂ ದೂರಪಡೆ.

ಕಾದಂ:—(ನಿಟ್ಟುಸುರು ಬಿಟ್ಟು)ಸಖೀ, ಆರಂಭದಲ್ಲಿಯೇ ಈ ಯುವಸ್ಥೆಯಾದ ಮೇಲೆ, ಮುಂದೇನಾಗುವದೋ ತಿಳಿಯೆನು. ಇದಕ್ಕೆ ಏನಾದರೂ ಒಂದು ಉಪಾಯವನ್ನು ಯೋಚಿಸು.

ಮಹಾ:—ನಾನೇತಕ್ಕೆ ಯೋಚಿಸಲಿ! ಆ ರಾಜಪುತ್ರನನ್ನು ವಿಚಾರಿಸು ಅಂದರಾಯಿತು.

ಕಾದಂಬರಿ:— (ಸಿಟ್ಟಿನಿಂದ) ಅದನ್ನು ನೀನೇನು ಹೇಳುವಿ? ಗುರುಹಿರಿಯರೂ, ತಾಯಿತಂದೆಗಳೂ, ಸಖೀ ಜನರೂ ಆಪ್ತಾಲೋಚನೆ ಹೇಳಲಿಕ್ಕೆ ಯೋಗ್ಯರೆಂದರಿತು ನಿನ್ನನ್ನು ಕೇಳಿದೆನು.

ಮಹಾ:—ಸಖೀ, ನಿಜವಾಗಿ ತಿಳಿದು ನೋಡಿದರೆ ಸಖೀಜನರೂ ಬೇಡ ಗುರುಹಿರಿಯರೂ ಬೇಡ, ಯೋಗ್ಯವರನನ್ನು ಗೊತ್ತುಹಚ್ಚಿದರೆಂದರೆ ಅವರ ಕೆಲಸ ತೀರಿತು; ಆ ಮೇಲೆ ಸರ್ವಸ್ವವೂ ಮನ್ಮಥನೇ ಆಗುವನು; ತಾಯಿಯೂ ಅವನೇ, ತಂದೆಯೂ ಅವನೇ, ಆಪ್ತೇಷ್ಟರೂ ಅವನೇ ತಿಳಿಯಿತೆ?

(ಇಷ್ಟರಲ್ಲಿ ಕೇಯೂರಕನು ಬರುವನು.)

ಕೇಯೂ:—(ಇಬ್ಬರಿಗೂ ನಮಸ್ಕರಿಸಿ) ದೇವಿಯವರೇ ಯುವ ರಾಜ ಚಂದ್ರಾಪೀಡನು ತಮ್ಮ ದರ್ಶನಕ್ಕೋಸ್ಕರ ಬರುತ್ತಿರುವನು.

ಕಾದಂಬರಿ:—ಸಖೀ ಮಹಾಶ್ವೇತೆ ಅವನ ಸಂಗಡ ನಾನೇನೂ ಮಾತಾಡುವವಳಲ್ಲ; ನೀನೇ ಮಾತಾಡುವವಳು.

ಮಹಾ:—(ತನ್ನಲ್ಲಿ) ಮೊದಲು ಮೊದಲು ಹೀಗೇ!

ಚಂದ್ರಾ:—(ಪ್ರವೇಶಿಸಿ)ದೇವೀ ಕಾದಂಬರೀ ಭಗವತೀ ಮಹಾ ಶ್ವೇತೆ, ನಿಮ್ಮಿರ್ವರಿಗೂ ನಮಸ್ಕರಿಸುವೆನು.

ಮಹಾ:—ಇತ್ತ ಬಾ ಈ ಆಸನವನ್ನಲಂಕರಿಸು.

ಕಾದಂ:— (ತನ್ನಲ್ಲಿ) ಇದೇನು! ಈ ಸುಂದರಮೂರ್ತಿಯನ್ನು ನೋಡುತ್ತಲೇ ನನ್ನ ಕೋಪವೆಲ್ಲ ನಿಃಶೇಷವಾಗಿ ಶಾಂತವೃತ್ತಿಯು ನೆಲೆಗೊಂಡಿತು!! (ಏಳುವಳು ಬಳಿಕ ಎಲ್ಲರೂ ಕೂಡ್ರುವರು.)

ಕೇಯೂ:—ದೇವೀ ಕಾದಂಬರಿ, ಇಗೋ ಯುವರಾಜರ ವಿಶ್ವಾಸಕ್ಕೆ ಪಾತ್ರಳಾದ ಪತ್ರಲೇಖೆಯು ಬಂದಿರುವಳು,

ಕಾದಂ:—(ಆನಂದದಿಂದ)ಬಾ ಪತ್ರಲೇಖೇ ನನ್ನ ಹತ್ತರ ಬಾ, ಕುಳಿತುಕೋ; ನಿನ್ನ ಮುಖಮುದ್ರೆಯನ್ನು ನೋಡಿ ನನಗೆ ಬಹಳ ಆನಂದವಾಯಿತು.

ಪತ್ರಲೇಖೆ:—ದೇವಿ ಯಾವ ಒಡವೆಯು ಎಲ್ಲಿ ಇರತಕ್ಕದ್ದೋ ಅಲ್ಲಿ ಇದ್ದರೇ ಅದಕ್ಕೆ ಶೋಭೆಯುಂಟಾಗುವದು.

ಕಾದಂ:—ಅಂತೆಯೇ ನಾನೂ ನಿನ್ನನ್ನು ಹತ್ತರ ಕೂಡ್ರಿಸಿಕೊಳ್ಳ ಲಿಚ್ಛಿಸುವೆನು! ಬಾ. (ಅವಳ ಕೈಹಿಡಿದು ಕೂಡ್ರಿಸುವಳು; ಮತ್ತು ಅವಳ ಸಂಗಡ ಏನೇನೋ ಮಾತಾಡಹತ್ತುವಳು.)

ಚಂದ್ರಾ:—(ತನ್ನಲ್ಲಿ) ಇವಳ ಈ ವಿರಹಾವಸ್ಥೆಯನ್ನು ಪ್ರತ್ಯಕ್ಷ ನೋಡಿದರೂ ಸಹ ನನ್ನ ಈ ಅರಸಿಕ ಮನಸ್ಸು ಸಂಶಯುವನ್ನು ಬಿಡಲೊ ಲ್ಲದು; ಛೀ ಛೀ, ಎಲೆ ಮನಸ್ಸೆ, ನಿನಗೆ ಧಿಃಕಾರವಿರಲಿ! [ಪ್ರಕಾಶ] ಭಗ ವತೀ ಮಹಾಶ್ವೇತೆ, ನಿಮ್ಮ ಈ ಸಖಿಯನ್ನು ಒಂದು ಸಂಗತಿಯ ವಿಷಯ ವಾಗಿ ವಿಚಾರಿಸಲಿಚ್ಛಿಸುವೆನು.

ಮಹಾಶ್ವೇತೆ:—ಕೇಳಬಹುದು ಆಲೋಚನೆ ಯಾತಕ್ಕೆ? ಅವಳಿಗೆ ಅದು ಗೊತ್ತಿದ್ದದ್ದಾಗಿದ್ದರೆ ಹೇಳುವಳು.

ಚಂದ್ರಾಪೀಡ:—(ನಗುತ್ತ) ನಾನಾದರೂ ಅವಳಿಗೆ ಗೊತ್ತಿದ್ದ ದ್ದನ್ನೇ ಕೇಳುವೆನು. ಹೇ:—

||ಪದ|| ರಾಗ—ತೋಡಿ, ತಾಳ-ರೂಪ.

ಮಾನಿನೀ ಮಣೀ ತರುಣೀ ಪೇಳುನೀಂ ||ಪ||
ಮನಸಿನಲ್ಲಿಹ ಬಳಲಿಕೆಗಳ ||ಅ. ಪ.||
ದೇವಿಯೆ ನಿನ್ನಮ-| ನೋವ್ಯಥೆಯೇನಿದು | ಭಾವಕಿಯೇನೀಂ ||
ಪೂವಾಸದೆ ಮಲಗಿದುದುನು | ತವೆದೃಷ್ಟಿಸಿ ತಾಪದೆಮುದ್ದೇ-||
ಹವಿದುದಹಿಪುದೆಂದು ನಿಜದೆ | ಪಾವನತರಮನದೆ ಜವದಿ ||೧||

ದೇವೀ ಕಾದಂಬರೀ, ನಿನ್ನ ಮುಖಸೌಂದರ್ಯದಲ್ಲಿ ಎಷ್ಟು ವ್ಯತ್ಯಾಸ ವಾಗಿರುವದಲ್ಲ? ರಕ್ತಕಮಲದಂತಿದ್ದ ನಿನ್ನ ನೇತ್ರಗಳು ನಿಸ್ತೇಜವಾಗಿರು ವವು; ಮುಖಕಮಲವು ಕಂದಿಹೋಗಿರುವದು; ಮೇಲಾಗಿ ಶರೀರವೂ ಕೃಶ ವಾಗಿರುವದು. ಸುಂದರೀ ಒಂದೆರಡು ದಿವಸಗಳಲ್ಲಿಯೇ ನಿನ್ನ ಸ್ಥಿತಿಯಲ್ಲಿ

ಇಷ್ಟು ಹೆಚ್ಚು ಕಡಿಮೆಯಾಗಲಿಕ್ಕೆ ಅಂಥ ಮಹತ್ವದಕಾರಣವಾದರೂ ಏನು?

ಕಾದಂ:-(ತನ್ನಲ್ಲಿ)ಇದು ಇವನ ಮೂರನೇ ಭೆಟ್ಟಿಯು. ಇವನ ಸಂಗಡ ಮಾತಾಡಬೇಕೆಂಬ ಕುತೂಹಲವೇನೋ ಕುಣಿಯುತ್ತಿರುವದು; ಆದರೆ ಭಯದಿಂದಲೋ ಸಂಶಯದಿಂದಲೋ ನನ್ನ ನಾಲಿಗೆಯೇ ಹೊರಳಲೊಲ್ಲದು.

ಚಂದ್ರಾಪೀಡ:—ಹೂ ದೇವೀ ಕಾದಂಬರೀ ಹೇಳು; ಹೇಳತಕ್ಕದ್ದನ್ನು ಹೇಳಿದಿದ್ದರೆ ಅದು ಅನುತಾಪವನ್ನುಂಟುಮಾಡುವದು.

ಮಹಾಶ್ವೇತೆ:—ರಾಜಪುತ್ರನೆ, ತನ್ನ ಸಂತಾಪದಕಾರಣವನ್ನು ತಾನೇ ಹೇಳಲಿಕ್ಕೆ ಲಜ್ಜೆಪಡುವಳು.

ಚಂದ್ರಾಪೀಡ:—ಸಾಧ್ವೀಮಣೀ, ಹಾಗಾದರೆ ನೀನೇ ಹೇಳು; ನಿನ್ನಾ ಅವಳಾ ಅತ್ಯಂತ ಸ್ನೇಹವಿರುವದರಿಂದ ಅವಳ ಸಂತಾಪದ ಕಾರಣವು ನಿನಗೆ ಗೊತ್ತಿರಲಿಕ್ಕೆ ಬೇಕು.

ಮಹಾಶ್ವೇತೆ:—ಹಗಲು ಸೂರ್ಯನ ತಾಪ ಇರುಳು ಚಂದ್ರನ ತಾಪ...............(ಮುಂದೆ ಹೇಳಲಾರದೆ ಸುಮ್ಮನಿರುವಳು)

ಚಂದ್ರಾಪೀಡ:—(ನಕ್ಕು ತನ್ನಲ್ಲಿ)ಚಂದ್ರನ ತಾಪವಾಗಿರಲಿಕ್ಕಿಲ್ಲ; ಚಂದ್ರ ಭಗಿನೀ ಸುತನಾದ ಮನ್ಮಥನ ತಾಪವಾಗಿರಬಹುದು! ಅಥವಾ ಚಂದ್ರಾಪೀಡನ ತಾಪವಾಗಿದ್ದರೂ ಆಗಿರಬಹುದು! (ಪ್ರಕಾಶ) ಹೂ ಭಗವತೀ ಹೇಳು; ಮುಂದೆ?

ಮಹಾಶ್ವೇತೆ:—ಇವಳಿಗೆ ಎಂಥ ಗೃಹವಾದರೂ ಅಷ್ಟೇ. ಇವಳ ಶರೀರಕ್ಕೆ ಶೀತಲವಾಯು ಸ್ಪರ್ಶಮಾಡಿದರೂ ದೇಹದಲ್ಲೆಲ್ಲ ಅಗ್ನಿಪ್ರವೇಶವಾದಂತಾಗುವದು; ಇದಕ್ಕೆ ಏನು ಮಾಡಬೇಕೆಂಬದು ತಿಳಿಯದಂತಾಗಿದೆ. ಈಗ ನಿನ್ನನ್ನು ನೋಡಿದಾಗಿನಿಂದ ಮಾತ್ರ ಇವಳ ಮುಖದಮೇಲೆ ಸ್ವಲ್ಪ ತೇಜಸ್ಸಿನ ಕಳೆಯುಂಟಾಗಿರುವದು.

ಚಂದ್ರಾ:—(ತನ್ನಲ್ಲಿ)ನಿಜ. ಇವಳಿಗೆ ಕಾಮಸಂತಾಪವು ಹೆಚ್ಚಾಗಿರುವದು; ಈ ಮಹಾಸಾಧ್ವಿಯಾಡಿದ ಮಾತಿನಮೇಲಿಂದ ವಿಚಾರ ಮಾಡು

ತ್ರಿಕಲಿಕ್ಕೆ ಸಂಶಯಕ್ಕೆ ಸ್ಥಳವೇ ಇಲ್ಲದಂತಾಯಿತು. ಆದರೂ ನನ್ನ ಅಪೇಕ್ಷೆ ಕೈಗೂಡುವದಸಾಧ್ಯವಾಗಬಹುದೇನು? (ವಿಚಾರಿಸಿ) ಛೇ ಛೇ ಹಾಗೇನೂ ಆಗಲಿಕ್ಕಿಲ್ಲ. ಆದರೆ ಏನು ಮಾಡಲಿ? ತಂದೆಯ ಆಜ್ಞಾಲೇಖವು ಬಂದು ಮುಟ್ಟಿರುವದು. (ಪ್ರಕಾಶ) ಸಾಧ್ವೀಮಣಿ ಮಹಾಶ್ವೇತೆ, ನನ್ನನ್ನು ನೋಡುವುದರಿಂದ ದೇವಿಗೆ ಸ್ವಲ್ಪ ಗುಣವಾಗುತ್ತದೆಂದು ಹೇಳುವಿಯೆಂದ ಮೇಲೆ, ಅವಳ ಸಮಾಧಾನಕ್ಕೋಸ್ಕರನಾನಾದರೂ ಇವಳ ಸನ್ನಿಧಿಯಲ್ಲಿಯೇ ಕುಳಿತಿರುತ್ತಿದ್ದೆನು; ಆದರೆ ಏನು ಮಾಡಲಿ! ಉಪಾಯವಿಲ್ಲದಾಗಿದೆ.

ಕಾದಂಬರಿ:—(ತನ್ನಲ್ಲಿ) ಇದು ಬಹುಶಃ ಇಲ್ಲಿಂದ ಹೊರಟು ಹೋಗುವ ವಿಷಯದ ಪ್ರಸ್ತಾವನೆಯು ಕಾಣುತ್ತದೆ.

ಚಂದ್ರಾಪೀಡ:—ಭಗವತೀ, ಎರಡು ಲೋಹಚುಂಬಕಗಳ ಮಧ್ಯದಲ್ಲಿ ಸಿಕ್ಕಂಥ ಲೋಹಖಂಡದೋಪಾದಿಯಲ್ಲಿ ನನ್ನ ಸಾಂಪ್ರತ ಸ್ಥಿತಿಯು ಇರುವದು ಕೇಳು:—

||ಸಾಕಿ||

ತ್ವರಿತದೆನಗರಕೆಬರ್ಪುದುಬಹುದಿನವಾದುದುತಡೆಯದಿರೆಂದು ||
ವರಪಿತನಿಂದಂ ಪತ್ರಿಕೆಯೈದಿಹುದೊರೆಯುಲಿನಿನಗೇನೆಂದು ||
ಅರಿಯೆನುನಾನೇನೂ || ತೋರೌಹಂಚಿಕೆಯನು ನೀನು ||೧||

ಭಗವತೀ ಈಗ ತಂದೆಯ ಅಪ್ಪಣೆಯನ್ನು ಮುರಿಯಲೋ, ನಿನ್ನ ಈ ಪ್ರಿಯ ಸಖಿಯಾದ ಕಾದಂಬರಿಯನ್ನು ಮರೆಯಲೋ? ನನಗಂತೂ ಯಾವದೂ ತಿಳಿಯಲೊಲ್ಲದು; ಈ ವಿಷಯವಾಗಿ ನೀನೇ ತಕ್ಕ ಹಂಚಿಕೆಯನ್ನು ಹೇಳು.

ಮಹಾಶ್ವೇತೆ:—(ವಿಚಾರಿಸ ಹತ್ತುವಳು.)

ಕಾದಂಬರಿ:—(ತನ್ನಲ್ಲಿ) ಕಡೆಗೆ ನಿರ್ದಯವೇನಿರ್ದಯವು, ಮೂರು ದಿನಗಳಿಂದ ನನ್ನಲ್ಲಿ ಪರಿಪೂರ್ಣವಾಗಿದ್ದ ಆಶೆಯು ಈಗ ಈತನಾಡಿದ ಮೂರೇ ಶಬ್ದಗಳಿಂದ ನಿಷ್ಫಲವಾಯಿತು. ದೇಹದಲ್ಲೆಲ್ಲ ಉರಿಯುರಿಯಾಗಹತ್ತಿತು; ಇದಕ್ಕೇನು ಮಾಡಲಿ?

ಮಹಾಶ್ವೇತೆ:—ಸಖೀ ಕಾದಂಬರೀ, ಈ ಯುವರಾಜ ಚಂದ್ರಾಪೀಡನು ನಿನ್ನ ಗುಣಪಾಶದಿಂದ ಬದ್ಧನಾಗಿರುವದರಿಂದ ಅವನಿಗೆ ಮಾತಾಡಲಿಕ್ಕೆ ಧೈರ್ಯಸಾಲಲೊಲ್ಲದು; ಆದದ್ದರಿಂದ ಅವನ ಮನೋಭಿಪ್ರಾಯವನ್ನು ನಾನೇ ತಿಳಿಸುವೆನು.

ಕಾದಂಬರಿ:—ಅದೇನು?

ಮಹಾಶ್ವೇತೆ:—ಅವನು ತನ್ನ ತಂದೆತಾಯಿಗಳ ದರ್ಶನಕ್ಕೋಸ್ಕರ ಹೋಗಬೇಕಾದದ್ದರಿಂದ ನಿನ್ನ ಅಪ್ಪಣೆಯನ್ನು ಕೇಳಬಂದಿರುವನು.

ಕಾದಂಬರಿ:—ಸಖೀ ಈ ವಿಷಯವಾಗಿ ನನ್ನನ್ನು ವಿಚಾರಿಸುವದೇನದೆ? ಗುರು-ಹಿರಿಯರ ದರ್ಶನಾರ್ಥವಾಗಿ ಹೋಗುವವರಿಗೆ ನಾನೇ ತಕ್ಕೆ ಬೇಡವೆನ್ನಲಿ! ಮದಲೇಖೆ, ನೀನು ಈಗಿಂದೀಗಲೇ ಹೋಗಿ ಕೆಲವು ಗಂಧರ್ವಕುಮಾರರಿಗೆ ಇವರ ಸಂಗಡ ಹೋಗಲಿಕ್ಕೆ ತಿಳಿಸು.

ಮದಲೇಖೆ:—ಒಳ್ಳೇದು (ಎಂದು ಹೋಗುವಳು.)

ಮಹಾಶ್ವೇತೆ:—ರಾಜಪುತ್ರನೆ, ನಿಮ್ಮಿಬ್ಬರ ದೇಹಗಳಗಲಿದರೂ ಪ್ರೀತಿಯು ಮಾತ್ರ ಅಗಲಕೂಡದು; ನೀವಿಬ್ಬರೂ ಚಂದ್ರಕುಮುದಿನಿಯರಂತೆ ಅನ್ಯೋನ್ಯ ಪ್ರೇಮವುಳ್ಳವರಾಗಿರತಕ್ಕದ್ದು; ಅಂದರಾಯಿತು.

ಕಾದಂ:---(ಮಹಾಶ್ವೇತೆಯ ಕಿವಿಯಲ್ಲಿ ಏನೇನೋ ಹೇಳುವಳು )

ಮಹಾ:—ರಾಜಪುತ್ರನೆ, ಕಾದಂಬರಿಯು ನಿನಗೊಂದು ವಿನಂತಿ ಮಾಡಿಕೊಳ್ಳುವಳು.

ಚಂದ್ರಾ:—ದೇವಿಯ ಆಜ್ಞೆಯು ಏನಿರುವದು? ಆಜ್ಞಾಪಿಸಬೇಕು.

ಮಹಾಶ್ವೇತೆ:—ನೀನು "ತಂದೆ-ತಾಯಿಗಳ ದರ್ಶನ ತಕ್ಕೊಂಡು ಬಹು ಬೇಗ ಹೊರಟು ಬರಬೇಕು. ಹಾಗು ಆ ವರೆಗೆ ನಿನ್ನ ವಿರಹದುಃಖವನ್ನು ಸಹಿಸುವದು ಬಹು ಕಠಿಣವಾಗುವದರಿಂದ, ಅದಷ್ಟು ಮಟ್ಟಿಗೆ ಸಮಾಧಾನಕ್ಕೋಸ್ಕರ ನಿನ್ನ ದಾಸಿಯಾದ ಪತ್ರಲೇಖೆಯನ್ನು ಇಲ್ಲಿಯೇ ಬಿಟ್ಟು ಹೋಗಬೇಕು" ಎಂದು.

ಚಂದ್ರಾಪೀಡ:—ಛೀ ಛೀ! ದೇವಿಯ ಅಪ್ಪಣೆಯನ್ನು ಮುರಿಯುವ ದಾರಿದರೂ ಹೇಗೆ? ಅವಳ ಇಷ್ಟಯಂತೆಯೇ ಆಗಲಿ; ಬಹುಬೇಗ ಹೊರಟು ಬರುವೆನು. ಪತ್ರಲೇಖೇ, ಕಾದಂಬರೀದೇವಿಯ ಅಪ್ಪಣೆಯ ಮೇರೆಗೆ ನೀನು ಇಲ್ಲಿಯೇ ಇರು; ನೀನು ಬಹು ಭಾಗ್ಯಶಾಲಿಯು; ಆದ್ದರಿಂದಲೇ ನಿನ್ನ ಮೇಲೆ ದೇವಿಯ ಕೃಪೆಯಾಯಿತು.

ಮದಲೇಖೆ:—(ಪ್ರವೇಶಿಸಿ) ಮಹಸ್. ಗಂಧರ್ವಪುತ್ರರು ಸಿದ್ಧರಾಗಿರುವರು.

ಚಂದ್ರಾಪೀಡ:—ಒಳ್ಳೇದು ಸಾಧ್ವೀಮಣೀ ಹೋಗಿಬರುವೆನು.

ದೇವೀ ಕಾದಂಬರೀ:—

||ಸಾಕಿ||

ತಾತಾಜ್ಞೆಯನೀದೇಹವು ಪಾಲಿಸಲೋಸುಗ ನಡೆದಿಹುದಿಂದು||
ಈ ತಾಣವತೊರೆಯಲ್ ಮನವೊಪ್ಪದೆತಳಮಳಿಪುದುಕೇಳ್‌ನೊಂದು||
ಅತಿಕರುಣಂದೋರೇ|| ಗತಿನೈಮವನ್ನೆಗಂನೀರೇ||೧||

(ಎಲ್ಲರೂ ಹೋಗುವರು.)

---

# ಚತುರ್ಥಾಂಕಂ

## ಮೊದಲನೆಯ ಪ್ರವೇಶ.

ಸ್ಥಳ:—ಹಿಮಾಚಲದಲ್ಲಿರುವ ಸುವರ್ಣಪುರದ ಹತ್ತಿರ ಸೇನೆಯು ಇಳಿದಿರುವ ಸ್ಥಳ.

ಸೇನಾಪತಿ:—(ಪ್ರವೇಶಿಸಿ ತನ್ನಲ್ಲಿ) ತಾರಾಪೀಡ ಮಹಾರಾಜರಿಂದ ಬಂದ ಪತ್ರವನ್ನು ನೋಡುತ್ತಲೇ ಪತ್ರಲೇಖೆಯನ್ನು ಕಾದಂಬರಿಯ ಹತ್ತಿರಬಿಟ್ಟು, ಸರ್ವಜನಸಮೇತನಾಗಿ ಹಿಂದಿನಿಂದ ಬರಲಿಕ್ಕೆ

ವೈಶಂಪಾಯನನಿಗೆ ತಿಳಿಸಿ, ಚಂದ್ರಾಪೀಡನು ಅತ್ತ ಉಜ್ಜಯಿನೀಪುರಕ್ಕೆ ಹೊರಟು ಹೋದನು. ಇತ್ತ ವೈಶಂಪಾಯನನು ಪಟ್ಟಣಕ್ಕೆ ಹೋಗುವ ಹವ್ಯಾಸವನ್ನು ಬಿಟ್ಟು, "ಅಚ್ಛೋದ ಸರೋವರ ತೀರದಲ್ಲಿದ್ದ ಲತಾಮಂಟಪದ ಹತ್ತರ ಭ್ರಮಿಷ್ಟನಂತೆ ತಿರುಗಾಡುತ್ತಿರುವನೆ"ಂದು ಸೇವಕ ಜನರು ಹೇಳುತ್ತಿರುವರು. ಇದಕ್ಕೇನು ಮಾಡಲಿ?(ವಿಚಾರಿಸಿ) ಆಗಲಿ, ಅವನಿಗೆ ಉಪದೇಶಮಾಡಿ ಕರೆತರುವದಕ್ಕಾಗಿ ಕೆಲವು ರಾಜಪುತ್ರರನ್ನೊಡಗೊಂಡು ಆ ಸ್ಥಳಕ್ಕೆ ಹೋಗುವೆನು. (ಹೋಗುವನು)

---

## ಎರಡನೆಯ ಪ್ರವೇಶ.

ಸ್ಥಳ:—ಅಚ್ಛೋದ ಸರೋವರತೀರದಲ್ಲಿದ್ದ ಲತಾಮಂಟಪ.

(ಸೇನಾಪತಿಯೂ, ಕೆಲವು ರಾಜಪುತ್ರರೂ, ವೈಶಂಪಾಯನನೂ ಮಾತಾಡುತ್ತ ನಿಂತಿರುವರು.)

ಸೇನಾಪತಿ:—ವೈಶಂಪಾಯನಾ, ನಾವು ನಿನಗೆ ಉಪದೇಶಮಾಡ ಹತ್ತಿ ಇಂದಿಗೆ ಎಂಟು ದಿವಸಗಳಾಗಿ ಹೋದವು; ಆದರೂ ನಿನ್ನ ಮನಸ್ಸು ತಿರುಗಲೊಲ್ಲದಲ್ಲ? ಹೀಗೇಕೆ ಮಾಡುತ್ತಿರುವೆ? ಭ್ರಮಿಷ್ಟನಂತೆ ಆಗಿ ಹೋದೆಯಲ್ಲ? ಸ್ವಲ್ಪ ವಿಚಾರಿಸು; ಚನ್ನಾಗಿ ತಿಳಿದು ನೋಡು.

ವೈಶಂಪಾಯನ:—ನೀವು ಬೇಕಾದಷ್ಟು ಉಪದೇಶಮಾಡಿದರೂ ನಾನೇನೂ ಈ ಸ್ಥಳವನ್ನು ಬಿಟ್ಟು ಕದಲುವವನಲ್ಲ; ನೀವು ಮಾತ್ರ ಸರ್ವ ಸೇನಾಸಮೇತರಾಗಿ ಹೊರಟುಹೋಗಿರಿ; ಯಾಕಂದರೆ, ಯುವರಾಜ ಚಂದ್ರಾಪೀಡನಿಲ್ಲದೆ ಅವನ ಸೇನೆಯೊಂದಿಗೆ ನೀವು ಈ ಸ್ಥಳದಲ್ಲಿ ವಾಸ ಮಾಡುವದು ಸರ್ವಥಾ ಯೋಗ್ಯವಲ್ಲ.

ವೀರಬಾಹು:—ವೈಶಂಪಾಯನಾ ನಾವು ಈ ಸ್ಥಳದಲ್ಲಿ ನಿಲ್ಲುವದೇನೋ ಯೋಗ್ಯವಲ್ಲ; ಇದಿರಲಿ, ಯುವರಾಜ ಚಂದ್ರಾಪೀಡನೆಂದರೆ ನಿನ್ನ ಕೇವಲ ಜ್ಯೇಷ್ಠಭ್ರಾತೃವು, ಪ್ರಾಣಮಿತ್ರನು, ಹೀಗಾಗಿ ನಿನ್ನ ಮೇಲೆ

ಅವನ ವಿಶ್ವಾಸ ಬಹಳ; ಇಷ್ಟೇ ಅಲ್ಲ ಸರ್ವಸೇನಾಭಾರವನ್ನೂ ನಿನ್ನ ಮೇಲೆಯೇ ಹಾಕಿ ಹೋಗಿರುವನು. ಇಂಥ ವೇಳೆಯಲ್ಲಿ ಅವನನ್ನು ಮೋಸಗೊಳಿಸುವದು ನಿನಗೆ ಯೋಗ್ಯವೇನು?

ವೈಶಂಪಾಯನ:—ನೀವು ಹೇಳುವದೇನೋ ನಿಜ. ಆದರೆ ಏನು ಮಾಡಲಿ? ಸಾಂಪ್ರತದಲ್ಲಿ ನಾನು ಎಲ್ಲ ಬಗೆಯಿಂದಲೂ ಪರಾಧೀನನೇ ಆಗಿರುವೆನು. ನಿಜವಾಗಿ ಹೇಳುತ್ತೇನೆ; ಈ ಪ್ರದೇಶವನ್ನು ಬಿಟ್ಟು ನನ್ನ ಕಾಲುಗಳು ಮುಂದಕ್ಕೇಳಲೊಲ್ಲವು; ದೃಷ್ಟಿಯು ಚಂಚಲವಾಗಿರುವದು; ಮನಸ್ಸು ಕಳವಳಿಸುತ್ತಿರುವದು; ಕಾರಣ ದಯಮಾಡಿ ನನ್ನನ್ನು ಬಿಟ್ಟು ನೀವು ಹೊರಟು ಹೋಗಿರಿ.

ಭದ್ರಸೇನ:—ಒಳ್ಳೇದು, ನೀನು ಈವರೆಗೂ ಯಾವ ಸಂಸಾರ ಸುಖವನ್ನೂ ಅನುಭವಿಸಿಲ್ಲ; ತಂದೆತಾಯಿಗಳ ಋಣದೊಳಗಿಂದ ಮುಕ್ತ ನಾಗಿಲ್ಲ; ವಂಶವಿಸ್ತಾರವನ್ನು ಮಾಡಿಲ್ಲ; ಲೋಕಹಿತಾರ್ಥ ಕೃತ್ಯಗಳನ್ನು ಮಾಡಿ ಸ್ಥಿರವಾದ ಕೀರ್ತಿಯನ್ನಾದರೂ ಸಂಪಾದಿಸಿಲ್ಲ. ಹೀಗಿರಲು ಇಷ್ಟರಲ್ಲಿಯೇ ವನವಾಸದ ಮೇಲೆ ಹೇಗೆ ಭಕ್ತಿಯುಂಟಾಯಿತು? ಈ ಭ್ರಮೆಯನ್ನು ಬಿಡು, ವೃದ್ಧ ಮಾತಾಪಿತರ ಕಡೆಗೆ ಲಕ್ಷ್ಯವಿಡು; ನಿನ್ನ ಅಗಲುವಿಕೆಯಿಂದ ಯುವರಾಜ ಚಂದ್ರಾಪೀಡನ ಅವಸ್ಥೆಯು ಏನಾಗ ಬಹುದು? ಇದನ್ನಾದರೂ ಧ್ಯಾನದಲ್ಲಿ ತೆಗೆದುಕೊ.

ವೈಶಂಪಾಯನ:—ನಾನು ಎಷ್ಟು ಒದರಿಕೊಂಡರೂ ನಿಮಗೆ ನಿಜವೆನಿಸುವದಿಲ್ಲ; ಆದರೆ ಚಂದ್ರಾಪೀಡನ ಕೊರಳಾಣೆಯಾಗಿ ಹೇಳುತ್ತೇನೆ; ನನ್ನಿಂದ ಮಾತ್ರ ಈ ಸ್ಥಳವನ್ನು ಬಿಡುವದಾಗದು. ಆದದ್ದರಿಂದ ನನ್ನ ಆಶೆಯನ್ನು ಬಿಟ್ಟು ನೀವು ಹೊರಟು ಹೋಗುವದುಚಿತವು.

ಸೇನಾಪತಿ:—ಆಯಿತು, ನಮ್ಮ ಸರ್ವೋಪಾಯಗಳೂ ವ್ಯರ್ಥ ವಾಗಿ ಹೋದವು; ರಾಜಪುತ್ರರೆ, ಇವನನ್ನು ಇಲ್ಲಿಯೇ ಬಿಟ್ಟು ಸರ್ವಸೇನಾ ಸಮೇತರಾಗಿ ಹೊರಟು ಹೋಗಿ ಈ ಸಂಗತಿಯನ್ನು ಚಂದ್ರಾಪೀಡನಿಗೆ

ತಿಳಿಸೋಣ ನಡೆಯಿರಿ.

ರಾಜಪುತ್ರರು:—ಒಳ್ಳೇದು ಹಾಗೇ ಆಗಲಿ.

ವೀರಬಾಹು:—ಸೇನಾಧೀಶ, ನಮ್ಮಿಂದ ಈ ವರ್ತಮಾನವನ್ನು ಕೇಳುತ್ತಲೇ ಇವನನ್ನು ಕರೆದುಕೊಂಡು ಹೋಗುವದಕ್ಕಾಗಿ ಯುವರಾಜ ಚಂದ್ರಾಪೀಡನು ಇತ್ತ ಬರಬಹುದು; ಆದ್ದರಿಂದ ಅಲ್ಲಿಯವರೆಗೆ ಪ್ರಾಣಕ್ಕೆ ಮಾತ್ರ ಅಪಾಯಮಾಡಿಕೊಳ್ಳಬೇಡವೆಂದು ಇವನಿಗೆ ತಿಳಿಸಬೇಕು.

ಸೇನಾಪತಿ:— ಹೌದು ಹೌದು.

ವೈಶಂಪಾಯನ:—(ಕೇಳಿ) ಛೇಛೇ ಹಾಗೇಕೆ ಮಾಡಿಕೊಳ್ಳಲಿ? ನಿರುಪಾಯನಾಗಿ ಇಲ್ಲಿ ನಿಂತಿರುವೆನೇ ಹೊರತು ಮತ್ತೇನೂ ಇಲ್ಲ. ಈ ವಿಷಯವಾಗಿ ನನ್ನ ಮೇಲೆ ಸಿಟ್ಟಾಗಬಾರದೆಂದು ಮಿತ್ರ ಚಂದ್ರಾಪೀಡನಿಗೆ ತಿಳಿಸಿರಿ.

ಸೇನಾಪತಿ:—ಒಳ್ಳೇದು ನಿನ್ನ ಇಚ್ಛೆಯಿದ್ದಂತಾಗಲಿ! ನಾವಂತೂ ನಿನ್ನ ಸೇವಕಜನರನ್ನಷ್ಟೇ ಬಿಟ್ಟು ಸರ್ವಸೇನಾಸಮೇತರಾಗಿ ಹೊರಟು ಹೋಗುವೆವು. (ವೈಶಂಪಾಯನನ ಹೊರತು ಎಲ್ಲರೂ ಹೋಗುವರು.)

ವೈಶಂಪಾಯನ:—ಇದೇನು! ನಾನು ಏನು ಹುಡುಕುತ್ತಿರುವೆನೆಂಬದು ನನಗೇ ತಿಳಿಯಲೊಲ್ಲದು; ರಮ್ಯಸ್ಥಳವನ್ನು ನೋಡಿ, ತರುಣರಸಿಕಜನರ ವೃತ್ತಿಯು ಮೋಹಿತವುಳ್ಳದ್ದಾಗುವದೇನೋ ನಿಜ; ಆದರೆ ನನ್ನ ವೃತ್ತಿಯಲ್ಲಿ ಹಾಗೇನೂ ಕಂಡುಬರುವದಿಲ್ಲ. ಈ ವನಶೋಭೆಯ ಕಡೆಗೆ ಎಳ್ಳಷ್ಟಾದರೂ ನನ್ನ ಲಕ್ಷ್ಯವಿಲ್ಲ. ಮಾತ್ರ—

||ಪದ|| ರಾಗ—ಮೋಹನ, ತಾಳ-ಝಂಪಾ.

ಭರದೆಸೆಳೆಯುತಲಿರುವದೀಲತಾಮಂಟಪಂ ||ಪ||
ಇರದೆಮನ್ಮನವೈದಲಿಚ್ಛಿಸುಗುಮಿದರೊಳ್ ||
ನೆರೆವಿಶ್ರಮಿಸಿತಾಂಪರಿತಾಪಮಂನೀಗವೇಳ್ಕುಮೆನಿಸುಗುಂ||೧||

ಇದರ ಮೇಲಿಂದ ನೋಡುತ್ತಿರಲಿಕ್ಕೆ, ಈ ಲತಾಮಂಟಪದಲ್ಲಿ ಯಾರೋ ಮಾಂತ್ರಿಕರು ವಾಸಿಸುತ್ತಿರಬಹುದೆಂಬಂತೆ ಭಾಸವಾಗುತ್ತದೆ. ಒಳ್ಳೇದು,

ಇದರ ಸಮೀಪಕ್ಕೆ ಹೋಗುವೆನು. (ತುಸುಮುಂದಕ್ಕೆ ನಡೆದು) ನಾನು ಸಮೀಪಕ್ಕೆ ಹೋದಹೋದ ಹಾಗೆ ಲೋಹಚುಂಬಕದಂತೆ ನನ್ನನ್ನು ಹೆಚ್ಚೆಚ್ಚು ಆಕರ್ಷಣ ಮಾಡಹತ್ತಿತು. (ಹತ್ತಿರ ಹೋಗಿ) ಅಹಹ! ಏನು ಚಮತ್ಕಾರವಿದು! ಯಾವ ಮನುಷ್ಯನಿಗೆ ಯಾವ ವಸ್ತುವಿನ ವಿರಹ ವಾಗಿರುತ್ತದೆಯೋ ಆ ವಸ್ತುವು ನಿರಂತರವಾಗಿ ಅವನ ಕಣ್ಣೆದುರಿಗೆ ಕಟ್ಟಿರಲಿಕ್ಕೆಬೇಕು. ಹೀಗಿದ್ದು ನಾನು ವಿರಹ ತಾಪದಿಂದ ಪೀಡಿತನಾಗಿ ರುವೆನೇ ಹೊರತು, ವಿರಹವನ್ನುಂಟುಮಾಡುವ ಆ ವಸ್ತುವು ಯಾವದಿರು ವದೆಂಬದು ಮಾತ್ರ ನನಗೆ ತಿಳಿಯಲೊಲ್ಲದು. (ನಕ್ಕು) ನಿಜ, "ಭ್ರಮೆ ಭ್ರಮೆ" ಯೆಂದು ಹೇಳುತ್ತಾರೆ; ಇದೇ ನಿಜವಾದ ಭ್ರಮೆಯು; ಇರಲಿ, ಈಗ ಇದರ ವಿಚಾರವೇಬೇಡ, ಇಂದು ಬಹು ತ್ರಾಸಗೊಂಡಿರುವೆನು. ಆದದ್ದರಿಂದ ಈ ಲತಾಮಂಟಪದೊಳಗಿನ ಶಿಲಾತಲದ ಮೇಲೆ ತುಸು ಹೊತ್ತು ವಿಶ್ರಾಂತಿಗೊಳ್ಳುವೆನು. (ಹಾಗೆ ಮಾಡುವನು.)

(ಆ ಮೇಲೆ ತಾಪಸಿಯ ವೇಷದಿಂದ ಖಿನ್ನಳಾದ ಮಹಾಶ್ವೇತೆಯೂ ತರಲಿಕೆಯೂ ಪ್ರವೇಶಿಸುವರು.)

ಮಹಾಶ್ವೇತೆ:—ತರಲಿಕೇ, ಎಲ್ಲಕ್ಕೂ ಮೊದಲು ನಾವು ಇಲ್ಲಿಗೆ ಬಂದ ದಿವಸ ಪ್ರಮೋದಿನಿಯು ನನಗೆ ಸಹಜ ವಿನೋದಾರ್ಥವಾಗಿ "ಯಾಕೆ? ನಿನ್ನ ಮಹೇಶ್ವರಪೂಜೆಯು ಇನ್ನೂ ಮುಗಿದಿಲ್ಲವೇನು? ಅನುರೂಪ ವರನು ದೊರೆಯುವ ವರೆಗೆ ಪಾರ್ವತೀದೇವಿಯಂತೆ ತಪಸ್ಸು ಮಾಡುತ್ತ ಇಲ್ಲಿಯೇ ಕೂಡ್ರುವೆಯಾ!" ಎಂದು ಚೇಷ್ಟೆ ಮಾಡಿದ್ದಿಲ್ಲವೆ? ಅದೇ ಈಗ ನಿಜ ವಾಗಿ ಪರಿಣಮಿಸಿದಂತಾಯಿತು. (ಅನ್ನುತ್ತ ದುಃಖಿಸುವಳು.)

ತರಲಿಕಾ:—ಸಖೀ, ಹಿಂದಿನ ಸಂಗತಿಯನ್ನು ನೆನಪಿಗೆ ತಂದು ಕೊಂಡು ವ್ಯರ್ಥವಾಗಿ ದುಃಖಿಸುವದರಿಂದ ಆಗುವದಾದರೂ ಏನು! ಹ್ಯಾಗಾದರೂ ಮಾಡಿ ದುಃಖವನ್ನು ಶಾಂತಮಾಡಿಕೊ.

ಮಹಾಶ್ವೇತೆ:—ಹಾಗಾದರೆ ಗುಹೆಯಲ್ಲಿ ಹೋಗಿ ವೀಣೆಯನ್ನು

ತೆಗೆದುಕೊಂಡು ಅಲ್ಲಿಯೇ ಮಹೇಶ್ವರ ದೇವಾಲಯದಲ್ಲಿ ಕುಳಿತುಕೋ. ನಾನೂ ಅತ್ತಕಡೆಗೆ ಬರುವೆನು.

ತರಲಿಕಾ:—ಒಳ್ಳೇದು, ಹಾಗೇಮಾಡುವೆನು. (ಹೋಗುವಳು)

ಮಹಾಶ್ವೇತೆ:— [ತನ್ನಲ್ಲಿ] ತರಲಿಕೆಯು ಮಹೇಶ್ವರ ದೇವಾಲಯಕ್ಕೆ ಬರುವಷ್ಟರಲ್ಲಿಯೇ ನಾನೂ ಪುಷ್ಪಗಳನ್ನೆತ್ತಿಕೊಂಡು ಹೋಗುವೆನು. (ಲತಾಮಂಟಪದ ಹತ್ತರಬಂದು ಪುಷ್ಪಗಳನ್ನೆತ್ತ್ತಹತ್ತುವಳು)

ವೈಶಂಪಾಯನ:—(ಸಪ್ಪಳ ಕೇಳಿ ಅವಳ ಕಡೆಗೆ ನೋಡಿ) ಅಹಹ! ಇವಳಾರು? ಚಂದ್ರನ ಮೇಲೆ ಕೋಪಗೊಂಡು ಈ ಲೋಕಕ್ಕೆ ಬಂದ ಚಂದ್ರಿಕೆಯೋ? ಅಥವಾ ಭಕ್ತವರಪ್ರದಾನಾರ್ಥವಾಗಿ ಬಂದ ತಪೋದೇವತೆಯೊ?(ಸಾವಕಾಶವಾಗಿ ನೋಡಿ) ಇದೇನು? ಇವಳು ನನ್ನ ಪರಿಚಯದವಳೆಂಬಂತೆ ಕಾಣುತ್ತಾಳೆ. ನಿಜ. ಇವಳನ್ನು ನಾನು ಪೂರ್ವದಲ್ಲಿ ಎಂದಾದರೂ ನೋಡಿರಲಿಕ್ಕೆ ಬೇಕು (ಸ್ವಲ್ಪ ವಿಚಾರಿಸಿ)ಛೇ ಛೇ ನನಗೂ ಇವಳಿಗೂ ಪರಿಚಯುವಾಗುವ ಬಗೆಯಾದರೂ ಹ್ಯಾಗೆ? ನನ್ನ ಜನ್ಮದಲ್ಲಿ ಈ ಪ್ರದೇಶದ ದರ್ಶನವೆಂದರೆ ಇದೇ ಮೊದಲನೆಯದು; ಇರಲಿ, ಈ ಶಿಲಾತಲದಮೇಲೆ ನಿದ್ರೆಹತ್ತಿದವನಂತೆ ಮಲಗಿ, ಮುಂದೆ ಏನಾಗುತ್ತದೆಂಬದನ್ನು ನೋಡುವೆನು.

ಮಹಾಶ್ವೇತೆ:-ಈಗ ನಿತ್ಯನಿಯಮದಂತೆ ಹೊರಗಿನಿಂದಲೇ ಪ್ರಾರ್ಥಿಸಿ, ಆ ಮೇಲೆ ಈ ಲತಾಮಂಟದ ಅಂತರ್ಭಾಗದಲ್ಲಿ ಪ್ರವೇಶಿಸುವೆನು.

||ಪದ|| ರಾಗ—ಕಮಾಚ್, ತಾಳ—ಆದಿ.

ನಾಥಾ ಪ್ರೀತಾ ಪ್ರಾರ್ಥಿಪೆ ||ಪ||
ಕಮಲನೇತ್ರನೆಸುಮನೋಹರನೆ || ರಮಣಾ ಸುಗುಣಾ ||ಅ. ಪ.||
ವರಮುನಿಕುವರಾಮಾರಸಮಾನನೆ ||
ತೋರಿಸುಮುಖವನು ತವಕದಿನೀಂ ||೧||
ವಿರಹದೆಬಳಲುತಲಿರುವೆನುಸತತಂ ||
ಪರಿಹರಿಸೆನ್ನಯ ತಾಪವನು ||೨||

ಹೇ! ಜೀವಿತೇಶ್ವರಾ ಪುಂಡರೀಕಾ! (ಎಂದು ಕೂಗುವಳು.)

ವೈಶಂಪಾಯನಃ—(ತನ್ನಲ್ಲಿ)"ಹಾ! ಜೀವಿತೇಶ್ವರಾ ಪುಂಡರೀಕಾ" ಎಂದು ಕೂಗುವಳಲ್ಲ? ಪುಂಡರೀಕನೆಂದರೆ ಯಾರು?

ಮಹಾಶ್ವೇತೆ:—ಯಾರೂ "ಓ" ಅನ್ನಲೊಲ್ಲರು. ಶಿವ ಶಿವಾ! ಇನ್ನೂ ನನ್ನ ಭಾಗ್ಯೋದಯಕಾಲವು ಒದಗಿಬಂದಿಲ್ಲ. (ಒಳಗೆ ನೋಡಿ) ಅವ್ವಯ್ಯಾ! ಒಳಗೆ ಶಿಲಾತಲದ ಮೇಲೆ ಯಾರೋ ಮಲಗಿರುವರಲ್ಲ! (ಆನಂದದಿಂದ) ನನ್ನ ಪ್ರಾಣನಾಥ ಪುಂಡರೀಕನನ್ನು, ಅಂತರಿಕ್ಷ ಮಾರ್ಗ ದಿಂದ ಒಯ್ದು ಆ ದಿವ್ಯ ಪುರುಷನು, ತನ್ನ ಭಾಷಣವನ್ನು ಸಾರ್ಥಕವಮಾಡಿ ಕೊಂಡನೆಂಬಂತೆ ತಿಳಿಯುತ್ತದೆ. (ಸಾವಕಾಶವಾಗಿ ನೋಡಿ) ಓಹೋ ಮಹಾರಾಜನೆ, ನಿನ್ನ ಮುಖವು ಪ್ರಾವರಣದಿಂದ ಮುಚ್ಚಿದ್ದರೂ ಅದರ ಕಾಂತಿಯು ಒಡೆದು ಕಾಣುವದು.

ವೈಶಂಪಾಯನ:—(ತನ್ನಲ್ಲಿ) ಒಳ್ಳೇದು, ಈಗ ನನ್ನ ತೇಜಸ್ಸಂತೂ ಇವಳಿಗೆ ತಿಳಿಯಿತು; ಇನ್ನು ಮುಂದೇನಾಗುತ್ತದೆಂಬನ್ನು ನೋಡುವೆನು.

ಮಹಾಶ್ವೇತೆ:—(ಲಗಬಗೆಯಿಂದ ಹತ್ತರ ಹೋಗಿ)ಹಾ! ಜೀವಿತೇಶ್ವರಾ, ನಿನ್ನ ಪೂರ್ವದ ಜಟಾವಲ್ಕಲಗಳು ಹೋಗಿ ಈ ವಸ್ತ್ರಾಲಂಕಾರಗಳು ಎಲ್ಲಿಂದ ಬಂದವು?

ವೈಶಂಪಾಯನ:— (ತನ್ನಲ್ಲಿ) ಏನು? ಪೂರ್ವದ ಜಟಾವಲ್ಕಲ! ನನಗೆ ಜಟಾವಲ್ಕಲಗಳು ಎಂದು ಇದ್ದವು?

ಮಹಾಶ್ವೇತೆ:—ಹಾ! ತಿಳಿಯಿತು; ನೀನು ನನ್ನ ಪಾಣಿಗ್ರಹಣ ಮಾಡುತ್ತಲೇ ಗೃಹಸ್ಥಾಶ್ರಮಿಯಾದೆಯೆಂದರಿತು, ಆ ದಿವ್ಯಪುರುಷನು ನಿನಗೆ ಈ ಅನುತ್ತಮ ಆಭರಣಗಳನ್ನು ಕೊಟ್ಟಿರಬಹುದು. ಪ್ರಾಣನಾಥನೆ, ನನ್ನ ಮಾರ್ಗಪ್ರತೀಕ್ಷೆಯ ಶ್ರಮದಿಂದ ನಿನಗೆ ನಿದ್ದೆಹತ್ತಿರಬಹುದಲ್ಲವೆ?

ವೈಶಂಪಾಯನ:— (ತನ್ನಲ್ಲಿ) ಆ ದಿವ್ಯಪುರುಷನು ಯಾರಿರುವನೆಂಬದು ನನಗೆ ಗೊತ್ತಿರಲಿಲ್ಲ; ಆದರೂ ಇಲ್ಲಿಯ ವರೆಗೂ ಮಾತಿನ

ಸಂಬಂಧವು ಚನ್ನಾಗಿ ಕೂಡಿತು. ಇನ್ನು ನನ್ನ ಮುಖಾವಲೋಕನವಾದನಂತರ ಏನು ಮಾಡುವಳೆಂಬದನ್ನು ನೋಡುತ್ತೇನೆ.

ಮಹಾಶ್ವೇತೆ:—(ಅವನ ಮುಖದ ಮೇಲಿನ ವಸ್ತ್ರವನ್ನು ಕೈಯಿಂದ ದೂರ ಮಾಡುತ್ತಲೇ ಬೆದರಿ ದೂರ ಸರಿದು ನಿಲ್ಲುವಳು.) ಅವ್ವಯ್ಯಾ! ಇವನು ಯಾರಿರಬಹುದು? ಯಾವನೋ ಒಬ್ಬ ತರುಣತೇಜಸ್ವೀ ಬ್ರಾಹ್ಮಣನಿರುವಂತೆ ತೋರುತ್ತದೆ. ಮುಖಲಕ್ಷಣವೇನೋ ನನ್ನ ಪ್ರಾಣಪ್ರಿಯ ಪುಂಡರೀಕನಂತೆ ಕಾಣುತ್ತದೆ. ಆದರೆ ನಿಜವಾಗಿ ಅವನಲ್ಲ [ಗಲ್ಲಗಲ್ಲ ಬಡಿದುಕೊಂಡು] ದೇವಾ! ಈ ರೀತಿಯಿಂದ ನನಗೆ ಚೇಷ್ಟೆ ಮಾಡುವದಕ್ಕಿಂತ ಒಮ್ಮೆಲೆ ಪ್ರಾಣಹರಣವನ್ನೇಕೆ ಮಾಡಲೊಲ್ಲೆ? (ಹೋಗಹತ್ತುವಳು.)

ವೈಶಂಪಾಯನ:— [ತನ್ನಲ್ಲಿ] ಅರರೆ! ಮೋಸವಾಯಿತು! ಇವಳು ಹೋಗಹತ್ತಿದಳು; [ಪ್ರಕಾಶವಾಗಿ] ಛೇ ಛೇ, ಸುಂದರೀ ಆಶಾಭರಿತಳಾಗಿ ಬಂದು ನಿರಾಶೆಯಿಂದ ಹೋಗುವದು ನಿನಗೆ ಯೋಗ್ಯವಲ್ಲ. [ಎಂದು ಲಗಬಗೆಯಿಂದ ಅವಳ ಹತ್ತರ ಹೋಗುವನು.]

ಮಹಾಶ್ವೇತೆ:— ಅಪ್ಪಾ! ನನ್ನಂಥ ತಪಸ್ವಿನಿಗೆ ಆಶೆಯೂ ಅಷ್ಟೇ ನಿರಾಶೆಯೂ ಅಷ್ಟೇ, ತಪಸ್ಸಿನ ಹೊರತು ಬೇರೆ ಯಾವದೂ ಬೇಕಾಗಿಲ್ಲ.

ವೈಶಂಪಾಯನ:—ಛೇ ಛೇ, ಸುಂದರೀ ಈ ತಪಸ್ಸು ನಿನಗೆ ಯೋಗ್ಯವಲ್ಲ; ಯಾರೇ ಆಗಲಿ ತಮ್ಮ ತಮ್ಮ ರೂಪವಯಸ್ಸುಗಳಿಗೆ ಸರಿಯಾದ ಆಚರಣೆಯನ್ನಿಡತಕ್ಕದ್ದು ಹೆಚ್ಚು ಶ್ರೇಯಸ್ಕರವಲ್ಲವೇ? ಹೇ ತರುಣೀ ಸ್ವಲ್ಪ ವಿಚಾರಿಸು; ಮಾಲತೀಲತಾಕಂಠಾಲಿಂಗನಕ್ಕೆ ಕುಸುಮಮಾಲೆಯು ಯೋಗ್ಯವಾಗುವಂತೆ ನಿನ್ನ ತನುಲತೆಗೆ ತರುಣ ಪುರುಷರ ಕರಾಲಿಂಗನವು ಯೋಗ್ಯವಲ್ಲವೇ?

ಮಹಾಶ್ವೇತೆ:— (ತನ್ನಲ್ಲಿ) ಇದೇನೋ ವಿಲಕ್ಷಣವಾಗಿ ತೋರುತ್ತದೆ; ಆದ್ದರಿಂದ ಇಲ್ಲಿ ನಿಲ್ಲುವದು ಯೋಗ್ಯವಲ್ಲ. (ಯೋಚಿಸಿ) ಇವನು ನನ್ನ ಪರಿಚಯದವನೆಂಬಂತೆ ಅಲ್ಪಸ್ವಲ್ಪ ಭಾಸವಾಗುವದರಿಂದ ಇವನ ದೇಶ

ಕೋಶಗಳನ್ನು ಕೇಳಬೇಕೆಂದು ನನ್ನ ಮನಸ್ಸು ಹಾತೊರೆಯುವದು; ಆದರೂ ಈಗ ಇದರ ಹವ್ಯಾಸವೇ ಬೇಡ. (ಹೋಗಹತ್ತುವಳು)

ವೈಶಂಪಾಯನ:—(ಅವಳ ಹಿಂದಿನಿಂದ ಹೋಗುತ್ತ)ಹೇ ಕೋಮಲಾಂಗೀ, ನಿನ್ನಂಥ ಲಾವಣ್ಯವತಿಯು ಇಂಥಾ ಯೌವನಭರದಲ್ಲಿ ತಾರುಣ್ಯ ಸುಖಕ್ಕೆ ವಿಮುಖಳಾಗುವದೆಂದರೆ ಕೇವಲ ವಿಲಕ್ಷಣವೇ ಸರಿ. ಒಂದು ವೇಳೆ ಇದೇ ನಿಜವಾಗಿ ಪರಿಣಮಿಸಿದಲ್ಲಿ:—

||ಪದ|| ರಾಗ—ಹಿಂದುಸ್ಥಾನೀಭೈರವ, ತಾಳ—ಆದಿ.

ವ್ಯರ್ಥವೇದಿಟಮಿವುಗಳ್ ಕೇಳ್ ತರುಣೀ ||ಪ||
ಮಧುಮಾಸವುಮೇಣ್ | ಮದನಶರಂಗಳ್ ||
ಸದಮಲಾಂಗಿಯೆ ಪೇಳ್ವೆಂ ||೧|| ಕೇಳ್—
ಪೆರೆಯುದಯವುಮೇಣ್ | ಸುರುಚಿರಪುಷ್ಪ-||
ಪರಿಮಲಯುತಪವನಂ ||೨|| ಕೇಳ್—

ಮಹಾಶ್ವೇತೆ:—(ಕಿಂಚಿದ್ರೋಷದಿಂದ)ತಿಳಿಯಿತು ನಿನ್ನ ಮನೋಭಾವವು! ನಿನ್ನ ಸೌಮ್ಯವಾದ ಆಕೃತಿಯ ಮೇಲಿಂದ ಇಂಥ ಕೆಟ್ಟ ಮಾತುಗಳು ನಿನ್ನಿಂದ ಹೊರಡುತ್ತವೆಂದು ಮೊದಲು ನಾನು ತಿಳಿದಿದ್ದಿಲ್ಲ. ನೀನು ಗೋಮುಖವ್ಯಾಘ್ರನೆಂಬದು ಈಗ ಚೆನ್ನಾಗಿ ತಿಳಿಯಿತು; ಇರಲಿ, ಆದದ್ದಾಯಿತು; ಈಗಲಾದರೂ ಇಲ್ಲಿಂದ ಹೊರಟು ಹೋಗು.

ವೈಶಂಪಾಯನ:—(ನಕ್ಕು) ಸುಂದರೀ, ಬೇಕಾದರೆ ನನ್ನನ್ನು ಗಣಿಸದೆ ಇರು; ಆದರೆ ನಿನ್ನ ತಾರುಣ್ಯಸೌಂದರ್ಯಗಳ ಮೇಲೆ ಮಾತ್ರ ನಿಷ್ಠುರತನವನ್ನು ತೋರಿಸಬೇಡ. ಯಾಕಂದರೆ:—

||ಕಂದ|| ಈಪರಿಸೌಂದರ್ಯವುಮೇ-|
ಣೀಪರಿ ತಾರುಣ್ಯಮಲ್ಪಕಾಲದೆ ನಿನ್ನಿಂ ||
ಪೋಪವಿವನಿತರೊಳಿರದತಿ |
ಪಾಪವಸಂಗಳಿಪೆ ಭೋಗಗೊಡದಿರ್ದಡೆನೀಂ ||೧||

(ಸ್ಪರ್ಶಮಾಡಲಿಕ್ಕೆ ಕೈಯನ್ನು ಅವಳ ಹತ್ತರ ಒಯ್ಯುತ್ತಲೇ)ಆದದ್ದರಿಂದಲೇ ನಿನಗೆ ಹೇಳುತ್ತೇನೆ; ಸುಂದರೀ ನೀನು ನನ್ನನ್ನು ಸ್ವೀಕರಿಸಿದ್ದಾದರೆ........

ಮಹಾಶ್ವೇತೆ:—(ಹಿಂದಕ್ಕೆ ಸರಿದು ಸಿಟ್ಟಿನಿಂದ) ಹಾ ಯಾಕೆ ಯಾಕೆ? ಜೋಕೆ, ಮುಂದಕ್ಕೆ ಹೆಜ್ಜೆಯಿಟ್ಟರೆ ನಿನ್ನ ಗತಿಯು ನೆಟ್ಟಗಾಗಲಿಕ್ಕಿಲ್ಲ. ತರಲಿಕೇ ತರಲಿಕೆ ಬೇಗ ಬಾ, ಇಗೋ ನೋಡು ಯಾವದೋ ಒಂದು ಕೋಡಗವು................

ತರಲಿಕೆ:—(ಓಡುತ್ತ ಒಂದು) ಬಂದೆ ಬಂದೆ ಸಖೀ ಏನಾಯಿತು?

ಮಹಾಶ್ವೇತೆ:—ತರಲಿಕೇ ನೀನು ಬಂದದ್ದರಿಂದ ಇವನು ಉಳಿದುಕೊಂಡನು; ಇಲ್ಲದಿದ್ದರೆ ಇವನ ಉದ್ಧಟತನದ ವರ್ತನಕ್ಕೆ ಸರಿಯಾಗಿ ತಕ್ಕಶಾಸನ ಮಾಡುತ್ತಿದ್ದೆನು.

ತರಲಿಕೆ:—ಛೀಛೀ ನಿರ್ಲಜ್ಜಾ, ತಿಳಿದೂ ತಿಳಿದು ಕಾಲಸರ್ಪಿಣಿಯ ಮೇಲೆ ಕಾಲಿಡುವೆಯಾ? ನಡೆ ಇಲ್ಲಿಂದ ಮೋರೆ ಒಣಗಿಸಿಕೊಂಡು. (ಮಹಾಶ್ವೇತೆಗೆ)ಸಖೀ ನಾನು ವೀಣೆಯನ್ನು ತೆಗೆದುಕೊಂಡು ದೇವಾಲಯಕ್ಕೆ ಹೋಗಿದ್ದೆನು; ಇಷ್ಟರಲ್ಲಿಯೇ ಈ ಪ್ರಕಾರ ನಡೆದಿರುವದು. [ವೈಶಂಪಾಶಯನನಿಗೆ]ನಡೆ ಹೊರಡು ಇಲ್ಲಿಂದ; ಕೆಟ್ಟ ಮೋರೆ ಮಾಡಿಕೊಂಡು ಯಾಕೆ ನಿಂತೆ? ಎಚ್ಚರ, ಇನ್ನೊಮ್ಮೆ ಎಂದಾದರೂ ಇಲ್ಲಿಗೆ ಬಂದದ್ದಾದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ. ಸಖೀ ಹೋಗೋಣ ನಡೆ.

ಮಹಾಶ್ವೇತೆ:—ನಡೆ. [ಹೋಗ ಹೋಗುತ್ತ ತನ್ನಲ್ಲಿ]ಇವನು ನನ್ನ ಸಂಗಡ ಉದ್ಧಟತನದಿಂದ ವರ್ತಿಸಿದರೂ, ಇವನನ್ನು ಶಾಪದಿಂದ ದಗ್ಧ ಮಾಡಲಿಕ್ಕೆ ನನ್ನ ಮನಸ್ಸು ಒಪ್ಪಲೊಲ್ಲದು. ಇವನನ್ನು ಈ ಮೊದಲು ಎಂದೋ ನೋಡಿದಂತೆ ಮಾತ್ರ ಭಾಸವಾಗುತ್ತದೆ. ಅಂತೆಯೇ ನನ್ನ ಮನಸ್ಸಿನಲ್ಲಿ ಇವನ ವಿಷಯವಾಗಿ ಕನಿಕರವು ಉತ್ಪನ್ನವಾಗುತ್ತಿರಬಹುದೇನು? (ಹೋಗುವರು)

ವೈಶಂ:—[ನಿಟ್ಟುಸುರುಬಿಟ್ಟು]ಆಯಿತು, ಮೊದಲನೇ ತುತ್ತಿಗೇ

ನೊಣ ಬಂದಂತಾಯಿತು. ನನ್ನ ಸರ್ವ ಮನೋರಥವೂ ವ್ಯರ್ಥವಾಗಿ ಹೋಯಿತು. ಆಗಲಿ, ಚಿಂತಿಸಿ ಫಲವೇನು? ಪ್ರೇಮಸಾಗರದಲ್ಲಂತೂ ಮುಳುಗಿರುವೆನು. ತೇಲಿಸಿದರೆ ತೇಲಿಸಲಿ ಮುಳುಗಿಸಿದರೆ ಮುಳುಗಿಸಲಿ, ಮನಸ್ಸಂತೂ ಅವಳಲ್ಲಿ ತಲ್ಲೀನವಾಗಿ ಹೋಗಿರುವದು. ಆದದ್ದರಿಂದ ನನ್ನ ಉತ್ಕಟೇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವದಕ್ಕಾಗಿ ಇನ್ನಾದರೂ ಪ್ರಯತ್ನಿಸುವೆನು. ಸದ್ಯಕ್ಕೆ ಮಾತ್ರ:—

||ಪದ|| ರಾಗ—ಕಾನಡಾ, ತಾಳ—ಆದಿ ("ರಜನಿನಾಥಹಾ" ಎಂಬಂತೆ)

ತೊರೆದು ಪೋದಳಾವರಕಾಮಿನಿಯು ||ಪ||
ಮೋರೆಯ ತೋರಿಸಿ ಮರೆಯಾದಳುತಾ ||ಅ. ಪ.||
ನವಯೌವನದಿಂಶೋಭಿಸುತಿರ್ದಾ—|
ಭಾವಕಿಯನುನಾಂಮರೆಯುವದೆಂತು ||
ಭಾವಜತಾನೀದೇಹವದಹಿಪಂ |
ನವಯುವತಿಯು ತಾನಾಶೆಯತೋರಿಸಿ |
ಜವದಿನಿರಾಶೆಯ ಮಾಡಿದಳಕಟಾ! ||೧||

(ಹೋಗುವನು.)

ಪತ್ರಲೇಖೆ:— [ಅರಮನೆಯ ಬಾಗಿಲ ಮುಂದೆ ಬಂದು ತನ್ನಲ್ಲಿ] ಕಾದಂಬರಿಯು ಚಂದ್ರಾಪೀಡನನ್ನು ಕರೆದುಕೊಂಡು ಬರುವದಕ್ಕಾಗಿ ನನ್ನನ್ನು ಕಳಿಸಿದ್ದಲ್ಲದೆ, ನನ್ನ ಬೆನ್ನಹಿಂದೆಯೇ ಕೇಯೂರಕನನ್ನೂ ಕಳಿಸಿರುವಳು. ಇದರ ಮೇಲಿಂದ ವಿಚಾರ ಮಾಡಿದರೆ, ಅವಳ ವಿರಹಾವಸ್ಥೆಯು ಮಿತಿಮೀರಿದಂತೆ ಕಾಣುತ್ತದೆ. ಆದದ್ದರಿಂದ ಯುವರಾಜನನ್ನು ಆದಷ್ಟು ಬೇಗ ಹೊರಡಿಸುವ ಪ್ರಯತ್ನ ಮಾಡಲಿಕ್ಕೆ ಬೇಕು.

ಮೇಘನಾದ:—(ಅವಸರದಿಂದ ಬಂದು) ಪತ್ರಲೇಖೇ, ನಡೆ ನಡೆ ಬೇಗ ನಡೆ; ಚಂದ್ರಾಪೀಡಮಹಾರಾಜರು ನಿನ್ನನ್ನು ಕರೆಯುತ್ತಿರುವರು.

ಪತ್ರಲೇಖೆ:--ಒಳ್ಳೇದು ನಡೆ ಹೋಗೋಣ. (ಇಬ್ಬರೂಹೋಗುವರು)

---

# ಮೂರನೆಯ ಪ್ರವೇಶ.

—:(-೦-):—

ಸ್ಥಳ:—ಚಂದ್ರಾಪೀಡನ ವಿಶ್ರಾಂತಿಮಂದಿರ.

[ಮೇಘನಾದ, ಚಂದ್ರಾಪೀಡ, ಪತ್ರಲೇಖೆ, ಕೇಯೂರಕ ಇವರು ಮಾತಾಡುತ್ತಿರುವರು.]

ಚಂದ್ರಾಪೀಡ:—ಪತ್ರಲೇಖೆ, ನನ್ನ ಅವಸ್ಥೆಯಾದರೂ ಅವಳಂತೆಯೇ ಆಗಿರುವದು. ಕೇಯೂರಕನನ್ನು ಕರೆದುಕೊಂಡು ನೀನು ಮೊದಲು ಹೋಗು. ನಾನು ತಾಯಿತಂದೆಗಳ ಅಪ್ಪಣೆ ಪಡೆದು ಹಿಂದಿನಿಂದ ಬರುವೆನು. ಅಲ್ಲಿಯುವರೆಗೂ ನೀನು ಅವಳನ್ನು ಸಮಾಧಾನಪಡಿಸುತ್ತಿರು.

ಪತ್ರಲೇಖೆ:—ಆಜ್ಞಾ ಮಹನ್.

ಕೇಯೂರಕ:—ಮಹಾರಾಜ ಬಹು ಬೇಗ ಹೊರಟು ಬರಬೇಕು,

ಚಂದ್ರಾ:—ನನಗೆ ಗುರುಹಿರಿಯರ ಅಪ್ಪಣೆ ದೊರೆಯುವದೊಂದೇ ತಡ, ನಿಮ್ಮ ಬೆನ್ನ ಹಿಂದೆಯೇ ಬಂದೆನೆಂದು ತಿಳಿಯಿರಿ. ಮೇಘನಾದಾ, ಅಚ್ಛೋದಸರೋವರದವರೆಗೆ ನೀನೂ ಇವರ ಸಂಗಡ ಹೋಗು.

ಮೇಘನಾದ:—ಆಜ್ಞಾ ಮಹನ್.

ಮೂವರೂ:—ಒಳ್ಳೇದು, ಹಾಗಾದರೆ ಬರುವೆವು.

ಚಂದ್ರಾಪೀಡ:—ಹೋಗಿರಿ, ನಾನು ಹೇಳಿದ ಯಾವತ್ತೂ ಸಂಗತಿಯು ಲಕ್ಷದಲ್ಲಿರಲಿ.

(ಮೂವರೂ ಹೋಗುವರು.)

ಚಂದ್ರಾಪೀಡ:—ನಾನು ಬರುವೆನೆಂದು ಹೇಳಿ ಇವರನ್ನು ಮುಂದಕ್ಕೇನೋ ಕಳಿಸಿದೆನು; ಆದರೆ ಈಗ ನನಗೆ ಗುರುಜನಗಳ ಅಪ್ಪಣೆಯು ದೊರೆಯುವ ಬಗೆ ಹೇಗೆ? ಅವರನ್ನು ವಿಚಾರಿಸದೆ ಹೋಗುವದಂತೂ ಯೋಗ್ಯವಲ್ಲ; ಅಂದಮೇಲೆ ಈಗ ಯಾವ ನೆವದಿಂದ ಅವರ ಅಪ್ಪಣೆಯನ್ನು ಪಡೆಯಲಿ? ನನ್ನ ವಿರಹದಿಂದ ಕಾದಂಬರಿಯು ಕಳವಳಪಡುತ್ತಿರುವಳೆಂದು ಹೇಳಲೋ? ಅಥವಾ ಅವಳ ಅಗಲುವಿಕೆಯಿಂದ ನನ್ನ

ಪ್ರಾಣವು ಬದುಕಿರಲಾರದೆಂದು ಹೇಳಲೋ? [ವಿಚಾರಿಸಿ] ಛೇ ಇದು ಯೋಗ್ಯವಲ್ಲ; ಹಾಗು ಈ ವಿಷಯವಾಗಿ ಎರಡನೆಯ ಯಾವ ಹಂಚಿಕೆ ಯೂ ತೋಚಲೊಲ್ಲದು. ಮಿತ್ರ ವೈಶಂಪಾಯನನಾದರೂ ಇದ್ದಿದ್ದರೆ ಅವನು ತಕ್ಕ ಆಲೋಚನೆಯನ್ನು ಹೇಳುತ್ತಿದ್ದನು. ಈಗ ಹೇಗೆ ಮಾಡಲಿ? (ವಿಚಾರಿಸ ಹತ್ತುವನು.) ಇಷ್ಟರಲ್ಲಿ ಒಬ್ಬ ವೃದ್ಧ ಕಂಚುಕಿಯು ಬರುವನು.

ಕಂಚುಕಿ:—ಕುಮಾರ ಚಂದ್ರಾಪೀಡಾ, ನಿನ್ನ ಸಂಗಡಹೋದ ಯಾವತ್ತೂ ಸೇನೆಯು ಬಂತು; ಆದರೆ............

ಚಂದ್ರಾಪೀಡ:—(ಆನಂದದಿಂದ ನಡುವೇ ಬಾಯಿಹಾಕಿ) ಆರ್ಯ, ಹಾಗಾದರೆ ಬೇಗಹೋಗಿ ಮಿತ್ರ ವೈಶಂಪಾಯನನನ್ನು ಕರೆದುಕೊಂಡು ಬಾ.

ಕಂಚುಕಿ:—ವತ್ಸಾ, ಅವನು ಬರಲಿಲ್ಲವೆಂದು ಸೇನೆಯೊಳಗಿನ ಜನರು ಹೇಳುವರು ಅಗೋ ನೋಡು, ಈ ಸಂಗತಿಯನ್ನು ನಿನಗೆ ತಿಳಿಸುವದಕ್ಕಾಗಿ ಸೇನಾಪತಿಯೂ, ಕೆಲವು ಜನ ರಾಜಪುತ್ರರೂ ಇತ್ತ ಕಡೆಗೆ ಬರುತ್ತಿರುವರು. (ಇಷ್ಟು ಹೇಳಿ ಹೋಗುವನು.)

ಚಂದ್ರಾ:—(ತನ್ನಲ್ಲಿ) ಅಕಟಾ! ಮಿತ್ರನು ಯಾಕೆ ಬಂದಿರಲಿಕ್ಕಿಲ್ಲ!

(ಸೇನಾಪತಿಯೂ, ರಾಜಪುತ್ರರೂ ಪ್ರವೇಶಿಸುವರು.)

ಸೇನಾಪತಿ-ರಾಜಪುತ್ರರು:—ಮಹಾರಾಜನೆ ವಂದಿಸುವೆವು.

ಚಂದ್ರಾ:—ಸರ್ವರೂ ಯೋಗ್ಯಾಸನದಲ್ಲಿ ವಿಶ್ರಮಿಸಿರಿ. (ಎಲ್ಲರೂ ಕೂಡ್ರುತ್ತಲೇ) ಸೇನಾಧೀಶ, ಮಿತ್ರ ವೈಶಂಪಾಯನನು ಯಾಕೆ ಬರಲಿಲ್ಲ?

ಸೇನಾಪತಿ:—ಮಹಾರಾಜನೆ, ಅವನು ಅಚ್ಛೋದಸರೋವರ ತೀರದಲ್ಲಿರುವ ಲತಾಮಂಟಪದಲ್ಲಿ ವೈರಾಗ್ಯವನ್ನು ತಾಳಿ ಕುಳಿತಿರುವನು; ಅವನನ್ನು ಕರೆತರುವದಕ್ಕಾಗಿ ಬಹಳ ಪ್ರಯತ್ನಮಾಡಿದೆವು. ಆದರೆ ನಮ್ಮ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಹೋದವು. ನಮ್ಮ ಉಪದೇಶಕ್ಕೆ ಬೇಸತ್ತು ಕಟ್ಟಕಡೆಗೆ ಅವನು, ನಾವು ತಿರುಗಿ ಮಾತಾಡದಂತೆ ಉತ್ತರ ಕೊಟ್ಟುಬಿಟ್ಟನು.

ಚಂದ್ರಾಪೀಡ:—ಏನೆಂದು ಹೇಳಿದನು?

ಸೇನಾಪತಿ:—"ಚಂದ್ರಾಪೀಡನ ಕೊರಳಾಣೆಯಾಗಿ ಹೇಳುತ್ತೇನೆ, ನನ್ನಿಂದ ಮಾತ್ರ ಈ ಸ್ಥಳವನ್ನು ಬಿಡುವದಾಗದು. ವ್ಯರ್ಥವಾಗಿ ಉಪದೇಶ ಮಾಡಬೇಡಿರಿ. ಸರ್ವಸೇನೆಯೊಡನೆ ಹೊರಟು ಹೋಗಿರಿ; ಮತ್ತು ಈ ವಿಷಯವಾಗಿ ದಯಮಾಡಿ ನನ್ನ ಮೇಲೆ ಸಿಟ್ಟಾಗಬಾರದೆಂದು ಮಿತ್ರ ಚಂದ್ರಾಪೀಡನಿಗೆ ತಿಳಿಸಿರಿ" ಎಂದು ಹೇಳಿದನು.

ರಾಜಪುತ್ರರು:—ಮಹಾರಾಜನೆ, ಅವನ ಸ್ಥಿತಿಯನ್ನು ಏನು ಹೇಳುವದದೆ! ತನ್ನಷ್ಟಕ್ಕೆ ತಾನೇ ಮಾತಾಡುತ್ತಿರುವನು; ತನ್ನಷ್ಟಕ್ಕೆ ತಾನೇ ನಗುತ್ತಿರುವನು; ಒಮ್ಮೊಮ್ಮೆ ಏನನ್ನೋ ಹುಡುಕಿದಂತೆ ಮಾಡುವನು; ಇವೆಲ್ಲ ಕೃತಿಗಳನ್ನು ನೋಡಿ ನಾವೆಲ್ಲರೂ ಆಶ್ಚರ್ಯಚಕಿತರಾಗಿ ಹೋದೆವು.

ಚಂದ್ರಾಪೀಡ:—(ತನ್ನಲ್ಲಿ)ಶಿವ ಶಿವ! ಮಿತ್ರನ ಅವಸ್ಥೆಯು ಯಾತರಿಂದ ಹೀಗಾಗಿರುವದೋ ತಿಳಿಯದು; ಭ್ರಮಿಷ್ಟನಂತೆ ತಿರುಗಾಡುತ್ತ ಎತ್ತ ಹೋದನೋ ಏನೋ!

ಕಂಚುಕಿ:—(ಪ್ರವೇಶಿಸಿ)ವತ್ಸಾ ಚಂದ್ರಾಪೀಡಾ, ವೈಶಂಪಾಯನನ ಈ ವೃತ್ತಾಂತವನ್ನು ಕೇಳಿ, ಶುಕನಾಸಪ್ರಧಾನ, ಮನೋರಮಾದೇವಿಯವರು ದುಃಖಿಸುತ್ತ ಕುಳಿತಿರುವರು. ಅವರನ್ನು ಸಮಾಧಾನಗೊಳಿಸುವದಕ್ಕಾಗಿ ತಾರಾಪೀಡಮಹಾರಾಜರೂ, ವಿಲಾಸವತೀ ದೇವಿಯವರೂ ಶುಕನಾಸನ ವಾಡೆಯ ಕಡೆಗೆ ಹೋದರು. ನಿನಗೂ ಅಲ್ಲಿಯ ವರೆಗೆ ಬರಹೇಳಿರುವರು.

ಚಂದ್ರಾಪೀಡ:—(ತನ್ನಲ್ಲಿ) ವಾಃ! ಒಳ್ಳೇ ಯುಕ್ತಿಯು ಸೂಚಿಸಿತು. ಮಿತ್ರ ವೈಶಂಪಾಯನನನ್ನು ಕರೆತರುವದಕ್ಕಾಗಿ ತಂದೆ ತಾಯಿಗಳ ಅಪ್ಪಣೆ ಕೇಳಬೇಕು. ಅಂದರೆ ಸಹಜವಾಗಿ ದೊರೆಯುವದು. ಆ ಮೇಲೆ ಅಚ್ಛೋದಸರೋವರಪ್ರದೇಶಕ್ಕೆ ಹೋಗಿ ಮಿತ್ರನನ್ನು ಕರೆದುಕೊಂಡು, ಮುಂದೆ ಕಾದಂಬರಿಯ ಭೆಟ್ಟಿಗೆ ಹೋಗಬೇಕು. (ಪ್ರಕಾಶ

ವಾಗಿ) ಒಳ್ಳೇದು, ಆರ್ಯಾ ಹೋಗೋಣ ನಡೆ.

ಕಂಚುಕಿ:—ಬರಬೇಕು. (ಎಲ್ಲರೂ ಹೋಗುವರು.)

## ನಾಲ್ಕನೆಯ ಪ್ರವೇಶ.

ಸ್ಥಳ—ಚಿತ್ರರಥವನ.

(ನಿದ್ರೆಯಲ್ಲಿ ನಡೆದಿರುವ ವೈಶಂಪಾಯನನು ಪ್ರವೇಶಿಸುವನು)

ವೈಶಂಪಾಯನ:—ಆँ ಏನಂದೆ? ಆ ದಿವಸ ನೀನು ನನಗಾಡಿದ ನಿಷ್ಠುರ ಭಾಷಣಗಳ ಸಲುವಾಗಿ ಕ್ಷಮೆಬೇಡುವೆಯಾ? ಛೀ ಛೀ ಹಾಗೇನೂ ತಿಳಿದುಕೊಳ್ಳಬೇಡ. ಆ ಮಾತುಗಳನ್ನು ನಾನೇನೂ ಮನಸ್ಸಿಗೆ ಹಚ್ಚಿಕೊಂಡಿಲ್ಲ. ನೀನಾದರೂ ವಿನೋದಕ್ಕೋಸ್ಕರ ಮಾತಾಡಿರಬಹುದು! ಹಾದೋ ಅಲ್ಲವೋ? ಆँ? ಗ್ರಾಹ್ಯವಸ್ತುವನ್ನು ಗ್ರಹಿಸುವದಕ್ಕೆ ಯಾರಂಜಿಕೆಯೇತಕ್ಕೆ?

||ಕಂದ|| ತರುಣಿಯೆ ನಿರ್ಜನವನವಿದು |
ನಿರುಕಿಸು ಮಂಡಪವ ನಿಬಿಡಮಾಗಿರ್ಕುಂನೀಂ ||
ಸ್ಮರನಾಟಕ್ಕಾತಾಣಕೆ |
ಕರೆದೊಯ್ಯುವೆ ನೀಗಳ್ಳಿದೆಕುಳ್ಳಿರುವೆಗಲೊಳ್ ||೧||

ಏನಂದೆ? ಇನ್ನೂ ನನ್ನ ಗುರುತು ಚನ್ನಾಗಿ ಹತ್ತಿಲ್ಲವೋ? ಸುಂದರೀ, ಇನ್ನು ಮೇಲೆ ನೀನು ಪ್ರತಿಕೂಲದ ಸಂಗತಿಗಳನ್ನು ಬೇಕಾದಷ್ಟು ಹೇಳು; ನಾನೇನೂ ಕೇಳುವದಿಲ್ಲ. (ಮನಸ್ಸಿನಲ್ಲಿ ಮಾತಾಡಿದಂತೆ ಮಾಡಿ) ಇಗೋ ನನ್ನ ಕಠೋರಭಾಷಣವನ್ನು ಕೇಳುತ್ತಲೇ ಹೇಗೆ ಬೆದರಿದಳು ನೋಡು! ಹೇ ತರುಣೀ, ನೀನು ಬಹು ಕೋಮಲ ಮನಸ್ಸಿನವಳೆಂಬದು ನನಗೆ ತಿಳಿದದ್ದರಿಂದಲೇ ನನ್ನ ಸರ್ವ ನಿಜ ಸಂಗತಿಯನ್ನು ನಿನಗೆ ತಿಳಿಸಿದೆನು. (ಸಮೀಪಕ್ಕೆ ಹೋದಂತೆ ತೋರಿಸಿ) ಇಗೋ ನೋಡು; ಮುಗುಳುನಗೆಯನ್ನು ತೋರಿಸಿ ಮುಖವನ್ನು ಹೇಗೆ ತಿರುಗಿಸಿದಳು.

||ಪದ|| ("ದೃಷ್ಟಿಭರೆಜಲಭಾರೆ" ಎಂಬಂತೆ)
ಮನ್ಮಥನಾಟಕೆ ನೀರೆಬಾರೆ ಬಳಿಸಾರೆ |
ಕುಲಶೀಲೇ, ಹರುಷಾಬ್ಧಿಯ ಪಡೆ ನೀಂಬಾರೆ ||ಪ||
ಭಯವನು ಬಿಡು ನೀಂ ಸುಂದರವದನೆ ||
ದಯವ ತೋರೆಲೆ ದಾಸನುನಾಂ ||೧|| ನೀರೆ—

ಎಲೇ ಸುಂದರೀ, ಬಾ ಬಾ, ವ್ಯರ್ಥ ಕಾಲ ಕಳೆಯಬೇಡ.

||ಕಂದ|| ತುಂಬಿನವಾಂಬುಜದಲರೊಳ್ |
ತುಂಬಿದ ನವಮಧುರರಸವನೀಂಟುವತೆರದಿಂ ||
ಅಂಬುರುಹವದನೆನಿನ್ನಂ |
ಚುಂಬಿಪೆನೆನಗಪೀಸಿಂದುಬಿಂಬಾಧರಮಂ ||೧||

[ಹೀಗೆ ಅನ್ನುತ್ತಲೇ, ಮಹಾಸ್ತ್ರೀತೆಯೆಂದು ತಿಳಿದು ಮುಳ್ಳುಗಳಿಯಿಂದ ಯುಕ್ತವಾದ ಒಂದು ಒಣಗಿದ ಬಳ್ಳಿಗೆ ಆಲಿಂಗನ ಕೊಡುವನು. ಆ ಕೂಡಲೆ ಮುಳ್ಳುಗಳು ನೆಟ್ಟದ್ದರಿಂದ ಎಚ್ಚರವಾಗಿ] ಇದೇನು? ಈ ವರೆಗೂ ನನ್ನ ಸಂಗಡ ವಿನೋದಪರ ಭಾಷಣಗಳನ್ನಾಡಿದ ಸುಂದರಿಯು ಅದೃಶ್ಯವಾಗಿ ಈ ಶುಷ್ಕಲತೆಯು ನನ್ನ ಕೈಯೊಳಗೆ ಹೇಗೆ ಬಂತು? ಹಾಗು ನಾನು ಮಲಗಿದ್ದ ಲತಾಮಂಟಪವು ಎಲ್ಲಿ ಉಳಿಯಿತು? [ನಾಲ್ಕು ಕಡೆಗೆ ನೋಡಿ] ಆಯಿತು! ಕಡೆಗೆ ಆ ತಪಸ್ವಿನಿಯ ನಿರಂತರ ಧ್ಯಾನದಿಂದ ನನಗೆ ಹುಚ್ಚು ಹಿಡಿದು ಹೋಯಿತು! ಸ್ವಪ್ನದಲ್ಲಿ ಸಹ ಬಡಬಡಿಸಹತ್ತಿದೆನು. ಒಳ್ಳೇದು, ಈಗ ನಾನು ಈ ವನದ ಯಾವ ಭಾಗದಲ್ಲಿ ಬಂದಿರುವೆನು? [ನೋಡಿ] ಅದದ್ದಾಗಲಿ ಗುಹೆಯ ಹತ್ತರ ಹೋಗಿ ಮುಂದೆ ಏನಾಗುತ್ತದೆಂಬದನ್ನು ನೋಡುವೆನು. [ಗುಹೆಯ ಹತ್ತರ ಹೋಗಿ ಸಾವಕಾಶವಾಗಿ ನೋಡಿ] ನಿಜ. ಇವಳೇ ನನಗೆ ಹುಚ್ಚು ಹಿಡಿಸಿದ ಸುಂದರಿಯು. ನಾನು ಅಧರಾಮೃತ ಪಾನಮಾಡಬೇಕೆನ್ನುವಷ್ಟರಲ್ಲಿ ತಪ್ಪಿಸಿಕೊಂಡು ಓಡಿ ಬಂದಿರುವಳು. [ಅವಳ ಕಡೆಗೆ ನೋಡಿ] ಇಗೋ ಓಡುತ್ತ ಬಂದ ಮನುಷ್ಯರಂತೆ ಹೇಗೆ

ಅತಿ ವೇಗದಿಂದ ಶ್ವಾಸೋಚ್ಛ್ವಾಸ ಬಿಡುತ್ತಿರುವಳು. ಇದರ ಮೇಲಿಂದ ಈ ವರೆಗೂ ಘಟಿಸಿದ ಕೃತಿಯೆಲ್ಲ ಸ್ವಪ್ನದಲ್ಲಿಯೇ ಆಯಿತೆಂದು ಹೇಗೆ ನಂಬಲಿ! [ಮತ್ತೆ ಅವಳನ್ನು ನೋಡಿ] ಯಾಕೆ? ನಾನಿರುತ್ತಿರಲಿಕ್ಕೆ ಪರ ಪುರುಷನನ್ನು ವರಿಸಬೇಕೆಂದು ಓಡಿ ಬಂದೆಯಾ? ಆ? ಇಗೋ ನೋಡು ಹೇಗೆ ಓರೆ ನೋಟದಿಂದ ನೋಡುವಳು. ಪ್ರಿಯೆ! ಓರೆಗಣ್ಣಿಂದ ಯಾಕೆ ನೋಡುವೆ? ಚನ್ನಾಗಿ ದಿಟ್ಟಿಸಿ ನೋಡು! [ವಿಚಾರಿಸುತ್ತ] ಇದು ಕೇವಲ ನನ್ನ ಮನೋರಾಜ್ಯವಾಗಿರಲಿಕ್ಕಿಲ್ಲವಷ್ಟೇ? ಹತ್ತರ ಹೋದರೆ ಪಾದತಾಡ ನವೇ ಪ್ರಾಪ್ತವಾಗುವುದೋ, ಸ್ವಲ್ಪಾದರೂ ಅಂತಃಕರಣ ಹುಟ್ಟು ವದೋ! ನನಗೆ ಹುಚ್ಚು ಬೇರೆ ಹಿಡಿದಿಲ್ಲವಷ್ಟೆ? ಯಾವದೊಂದು ಕೆಲಸ ವನ್ನು ಸಮಯುವರಿತು ಮಾಡುವದು ಯೋಗ್ಯವು; ನಾನಂತೂ ಕಾಮ ಪೀಡಿತನಾಗಿ ಹೋಗಿರುವೆನು. ಇವಳಾದರೂ ಒಬ್ಬಳೇ ಇರುವಳು. ಎಡಬಲದಲ್ಲಿ ಯಾರೂ ಇಲ್ಲ. ಮೇಲಾಗಿ ಹಿಟ್ಟುಚಲ್ಲಿದ ಹಾಗೆ ಬೆಳದಿಂಗಳು ಬಿದ್ದದೆ. ಅಂದಮೇಲೆ ಇನ್ನು ತಡವೇತಕ್ಕೆ? ಒಮ್ಮೆಲೇ........(ನೋಡಿ ಬೆದರಿ) ಹಾ! ಸರ್ವಸ್ವವೂ ಘಾತವಾಯಿತು; ಇವಳು ಎದ್ದು ಕುಳಿತಳು.

ಮಹಾಶ್ವೇತೆ:—(ಸಾವಕಾಶವಾಗಿ ನೋಡುತ್ತ ತನ್ನಲ್ಲಿ)ಮೊದಲು ಅಸ್ಪಷ್ಟವಾಗಿ ಏನೇನೋ ಕಾಣಿಸಿತು; ಈಗ ತೀರಾ ಸ್ಪಷ್ಟವಾಗಿ ಕಾಣಿಸ ಹತ್ತಿತು. ಈ ಕೋಡಗವು ಮತ್ತೆ ನನಗೆ ಗಂಟುಬಿತ್ತು. ನಾನೊಬ್ಬಳೇ ಇರುವದನ್ನು ನೋಡಿ ಈ ನೀಚನು ನನ್ನ ಅಂಗಕ್ಕೆ ಸ್ಪರ್ಶ ಮಾಡಿದ್ದಾದರೆ ಏನು ಮಾಡಲಿ! ಹಾ! ದೇವಾ:—

||ಪದ|| ರಾಗ—ಮಾಂಡ್, ತಾಳ—ಆದಿ. ("ಮಲಾಮದನ" ಎಂಬಂತೆ)

ಪರಾತ್ಪರನೇ ದೇವಾ ಪರಿಪಾಲಿಸೈ ||ಪ||
ಮಾರಹರನೆ ಕೇಳ್ ಪತಿವ್ರತೆಯುನಾಂ ||ಅ. ಪ.||
ಪ್ರಭೋದಯಾಳೋ ವಿನಯದಿ ಬೇಡುವೆ ||
ಶುಭಂದೇಹಿಪಾಹಿ ಗೌರೀಶನೆ ||೧||

ನಾನು ಈ ದಿವಸ ತರಲಿಕೆಯನ್ನು ಕಾದಂಬರಿಯ ಕಡೆಗೆ ಕಳಿಸುವದನ್ನಾದರೂ ಬಿಡಲಿಲ್ಲ. ಒಬ್ಬಳೇ ಒಬ್ಬಳಾಗಿರುವೆನು. ಈ ಸಮಯದಲ್ಲಿ ಇಲ್ಲಿರುವದು ಒಳಿತಲ್ಲ. ಗುಹೆಯೊಳಗೆ ಹೋಗಿ ಕೂಡ್ರುವೆನು. (ಹೋಗ ಹತ್ತುವಳು.)

ವೈಶಂಪಾಯನ:—(ಅವಳ ಮುಂದೆ ಹೋಗಿ) ಛೇ ಛೇ!

||ಪದ|| ರಾಗ-ಆರಬಿ, ತಾಳ-ಆದಿ.

ಕಮಲಲೋಚನೆ ||ಪ|| ಸುಂದರೀಸುಕುಮಾರಿನೀ-||
ನೀಶುಭಕಾರ್ಯವನ್ನು | ಜರಿವರೆನಾರೀ | ಈಸುಮುಖಯುನವನು
ತಾಪಸಿಯೆ | ತೊರೆವರೇಕಾಮಿನೀಇಂತು ||ಅ. ಪ||
ಕೋಮಲೆನೆರೆನಂ| ಬಿದೆನುಶುಭಾಂಗಿಯೆಯೋಚಿಸು
ಮತ್ | ಸ್ಥಿತಿಯನಿಂದುಪೋಪುದು ಪೂರಿಸದಿರಲರಿ
ಮತ್ಪ್ರಾಣವುಕೇಳ್ | ಪೋಗಬೇಡೆಕಾಮಿನಿನೀಂ ||೧||

ಹೇ ಶುಭಾಂಗೀ, ನೀನೇನೋ ಒಳಗೆ ಹೋಗಲಿಕ್ಕೆ ಪ್ರಯತ್ನಿಸುವೆ; ಆದರೆ, ಈ ದಿನ ವೈಶಂಪಾಯನನ ಪ್ರಾಣರಕ್ಷಣೆಗೆ ಯಾವ ಮಾರ್ಗವನ್ನು ತೋರಿಸುವೆ?

ಮಹಾಶ್ವೇತೆ:— (ತನ್ನಲ್ಲಿ) ಹಾ! ಇಂದಿನ ಪ್ರಸಂಗವಂತೂ ಕಠಿಣ ಬಂತು! [ಪ್ರಕಾಶವಾಗಿ] ಎಲವೋ, ನೀನು ಬ್ರಾಹ್ಮಣ ಕುಲದವನಿರುವೆಯೆಂದರಿತು, ನಿನಗೆ ಕೈಜೋಡಿಸಿ ಬೇಡಿಕೊಳ್ಳುತ್ತೇನೆ; ನಿನ್ನ ಅಮಂಗಲ ಭಾಷಣಗಳಿಂದ ನನ್ನನ್ನು ಸಿಟ್ಟಿಗೆಬ್ಬಿಸಬೇಡ; ನಾನು ಒಳಗೆ ಹೋಗುವವರೆಗೆ ಸುಮ್ಮನಿರು. ಇಲ್ಲವಾದರೆ ನೀನಾದರೂ ಇಲ್ಲಿಂದ ಹೊರಟು ಹೋಗು.

ವೈಶಂಪಾಯನ:—ಪ್ರಿಯೆ! ನಾನೆಲ್ಲಿ ಹೋಗಲಿ, ಮದನಜ್ವಾಲೆಯಿಂದ ಸುಡುತ್ತಿರುವ ನನ್ನ ದೇಹವನ್ನು ಶಾಂತಮಾಡಲು, ನಿನ್ನಹೊರತು ಅನ್ಯರಾರೂ ಇಲ್ಲ. ಆದದ್ದರಿಂದ ನನ್ನ ಮನಸ್ಸನ್ನು:—

||ಪದ|| ("ಆನಬಾನಜಿಯೆಮಿಲಾಯೆ")

ಕುಂದಿಸುವರೆಸುಂದರಾಂಗಿ ಬಾ ||ಪ||

ವಂದಿಸುವೆ ನಂದದಿ ನಾಂ ||ಅ. ಪ ||

ಮದನಕೇಳಿಯಾಡಿಮನಕೆ |

ಮುದವನುಸಲೆಬೀರಲು ನೀಂ |

ಸದಮಲಾಂಗಿಸ್ವೀಕರಿಸು | ಪಾದಕೆರಗುವೆಂ ||೧||

[ಹೀಗೆಂದು ಅವಳ ಕಾಲಿಗೆರಗುವನು.]

ಮಹಾಶ್ವೇತೆ:—[ಅವನನ್ನು ಕಾಲಿನಿಂದ ಒದೆದು] ಛೀ ಚಾಂಡಾಲಾ.

||ಪದ|| ರಾಗ—ಶಂಕರಾಭರಣ, ತಾಳ—ಆದಿ.

ದುರುಳನೇಸರಿದೂರನೀಂ ಕಾಮಾಂಧಾ |

ನರಾಧಮನೆಪಶು ಫಡ! ಮೂಢನೆ ||ಪ||

ಸರಿಯೆ? ಪಾಮರಾ ಪಾಪರಾಶಿಯೆ |

ಬರಿದೆನುಡಿವುದುಶುಕದೋಲಿರಿಯದೆ ನೀಚನೆನೀಂ ||

ಸುಡುದುರಾತ್ಮ ನಿನ್ನಯಕುಜಿಹ್ವೆಯನು ||೧||

ವೈಶಂಪಾಯನ:—ಸುಂದರೀ ನನ್ನ ಭಾಷಣದ ಕಡೆಗೇಕೆ ಲಕ್ಷ್ಯಗೊಡುವೆ? ದಯಮಾಡಿ ನನ್ನ ಮನೋದಯದ ಕಡೆಗೆ ಲಕ್ಷ್ಯವಿಡು. ನನ್ನ ಸ್ಥಿತಿಯನ್ನಾದರೂ ಅರಿತವಳೇ ಇರುವಿಯಲ್ಲವೆ?

ಮಹಾಶ್ವೇತೆ:—ಎಲವೋ ಪಾಪಿಷ್ಠನೆ ಇನ್ನೂ ನಿನಗೆ ಸಾಕಾಗಲಿಲ್ಲವೆ? ನಿಲ್ಲು ನಿಲ್ಲು ಬ್ರಹ್ಮದೇವನು ತಪ್ಪಿ ನಿನ್ನನ್ನು ಮನುಷ್ಯಜನ್ಮಕ್ಕೆ ಹಾಕಿರುವನು. ಅವನು ಮಾಡಬೇಕಾಗಿದ್ದ ನಿಜವಾದ ಕೃತಿಯನ್ನು ನಾನೇ ಮಾಡುವೆನು. (ಮೇಲಕ್ಕೆ ನೋಡಿ) ಹೇ ಸರ್ವಸಾಕ್ಷೀನಿಶಾನಾಥಾ ಚಂದ್ರಮಾ, ನಾನಂತೂ ಈ ಮೊದಲೇ ಪುಂಡರೀಕನನ್ನು ಪರಿಗ್ರಹಿಸಿರುವೆನು. ಅವನ ವಿಷಯವಾಗಿ ನಿಶ್ಚಲವಾದ ಪಾತಿವ್ರತ್ಯವನ್ನು ಕಾಯ್ದುಕೊಂಡದ್ದೇ ನಿಜವಾಗಿದ್ದರೆ, ಈ ನೀಚನು ತನ್ನ ಗುಣ-ಭಾಷಣ

ಗಳಿಗೆ ಸರಿಯಾಗಿ ಶುಕಯೋನಿಯಲ್ಲಿ ಜನ್ಮ ಪಡೆಯಲಿ. (ಎಂದು ಶಾಪ ಕೊಡುವಳು. ಆ ಕೂಡಲೆ ಅವನ ದೇಹವು ದಗ್ಧವಾಗುವದು.)

ವೈಶಂಪಾಯನನ ಸೇವಕರು:—(ದೂರಿಂದಲೇ ನೋಡಿ ಹಾಯ್ ಹಾಯ್! ನಮ್ಮ ವೈಶಂಪಾಯನ ಮಹಾರಾಜನು ದಗ್ಧನಾಗಿ ಹೋದನು; ಈ ಸಂಗತಿಯು ಅವನ ಮಿತ್ರ ಚಂದ್ರಾಪೀಡನಿಗೆ ತಿಳಿದರಂತೂ ಅವನು ದೇಹವನ್ನೇ ಇಡುವದಿಲ್ಲ. ಶಿವ ಶಿವ! ನಾವೆಲ್ಲರೂ ದುಃಖದಿಂದ ಕಾಲ ಕಳೆಯಬೇಕಾಯಿತಲ್ಲ!

ಮಹಾಶ್ವೇತೆ:—(ಕೇಳಿ) ಹಾ! ಘಾತವಾಯಿತು; ಇವನು ಆ ರಾಜ ಪುತ್ರನ ಪ್ರಾಣಮಿತ್ರನೆಂಬಂತೆ ತೋರುತ್ತದೆ. ಈ ಸಂಗತಿಯು ಮೊದಲೇ ಗೊತ್ತಾಗಿದ್ದರೆ ಇಷ್ಟು ಅನಾಹುತವಾಗುತ್ತಿದ್ದಿಲ್ಲವಲ್ಲ! ಹಾಯ್ ಹಾಯ್! ರಾಕ್ಷಸೀ ಮಹಾಶ್ವೇತೆ, ಇದೇನು ದುಷ್ಕೃತಿ ಮಾಡಿದೆ! ಬ್ರಾಹ್ಮಣವಧ ಕ್ಕಾಗಿಯೇ ಜನ್ಮಿಸಿರುವೆಯಾ? ಛೀ ಛೀ ಚಾಂಡಾಲಿ, ಈಗ ಆ ರಾಜಪುತ್ರನು ಬಂದು "ನನ್ನ ಮಿತ್ರನು ಎಲ್ಲಿರುವನು?" ಎಂದು ಕೇಳಿದರೆ ಅವನಿಗೇನು ಹೇಳುವೆ? ವೈಶಂಪಾಯನನ ಈ ದೇಹಭಸ್ಮವನ್ನು ಚಂದ್ರಾಪೀಡನು ನೋಡಿ, ಒಂದು ಕ್ಷಣ ಸಹ ಬದುಕಿರಲಾರನು. ಅವನಿಗೆ ಮುಖವನ್ನು ತೋರಿಸುವದಕ್ಕಿಂತ, ಅಚ್ಛೋದಸರೋವರಕ್ಕೆ ಹೋಗಿ ಅದರಲ್ಲಿ ಹಾರಿ ಕೊಳ್ಳುವುದು ನೆಟ್ಟಗೆ.

||ಪದ|| ರಾಗ—ಹಿಂದುಸ್ಥಾನೀಭೈರವ. ತಾಳ—ಆದಿ.

ಸುರಾಧೀಶಾ ಪುರಾರಿಯೆ ಪಾಪಾತ್ಮಳು ನಾಂ ||ಪ||
ಪರಂಧಾಮಾ ಅಸುವಂ ಕಳೆ ನೀಂ | ನಿರಾಮಯಾ ನಿಷ್ಪ್ರಪಂಚ |
ನಿರಂಜನಾ ಸ್ಮರಹರನೆ ಪರಾತ್ಪರಾ ||೧||

(ಮಹಾಶ್ವೇತೆಯು ದುಃಖಿಸುತ್ತಲೇ ಮೂರ್ಛೆಬಂದು ಬೀಳುವಷ್ಟರಲ್ಲಿ)

ತರಲಿಕೆ:—(ಪ್ರವೇಶಿಸಿ) ಹಾಯ್ ಹಾಯ್! ಕಟ್ಟಕಡೆಗೆ ಇದೇನು ಅನಾಹುತವಾಯಿತಲ್ಲ. (ಎಂದು ಅವಳನ್ನು ಹಿಡಿದುಕೊಂಡು ಕೂಡ್ರು

ವಳು. ಅಷ್ಟರಲ್ಲಿಯೇ,)

ಚಂದ್ರಾಪೀಡ:—(ಪ್ರವೇಶಿಸಿ) ತರಲಿಕೆ ಈ ಮಹಾಸಾಧ್ವಿಯು ಇಷ್ಟು ದುಃಖಿಸಲಿಕ್ಕೆ ಕಾರಣವೇನು?

ತರಲಿಕೆ:—(ಏನೂ ಮಾತಾಡದೆ ತಲೆಬಾಗಿಸಿಕೊಂಡು ಕುಳಿತಿದ್ದ ಮಹಾಶ್ವೇತೆಯ ಕಡೆಗೆ ನೋಡುವಳು.)

ಮಹಾಶ್ವೇತೆ:—ರಾಜಪುತ್ರನೆ, ಅದನ್ನೇನು ಹೇಳಲಿ? ಒಬ್ಬ ಬ್ರಾಹ್ಮಣಪುತ್ರನು............(ದುಃಖಿಸ ಹತ್ತುವಳು)

ಚಂದ್ರಾಪೀಡ:—ಭಗವತೀ ದುಃಖಿಸಬೇಡ, ಸರ್ವಸಂಗತಿಯನ್ನು ವಿದಿತಪಡಿಸು. ಆ ಬ್ರಾಹ್ಮಣಪುತ್ರನು ಏನು ಮಾಡಿದನು?

ಮಹಾಶ್ವೇತೆ:—ಕಾಮಪೀಡಿತನಾಗಿ, ನನಗೆ ಅಸಂಬದ್ಧ ಭಾಷಣ ಗಳನ್ನಾಡಿದನು. ಎಷ್ಟು ಹೇಳಿದರೂ ಕೇಳಲಿಲ್ಲ. ಕಟ್ಟಕಡೆಗೆ ಪ್ರಸಂಗವು ಕಠಿಣವೊದಗಿಬಂದದ್ದರಿಂದ ಅವನ ಮೇಲೆ ಕೋಪಗೊಂಡು ಶಾಪವಿತ್ತೆನು.

ಚಂದ್ರಾ:—ಸಾಧ್ವೀಮಣಿ, ಆ ಶಾಪದ ಪರಿಣಾಮವೇನಾಯಿತು?

ಮಹಾಶ್ವೇತೆ:—ಅದರಿಂದ ಅವನ ದೇಹವು ದಗ್ಧವಾಗಿಹೋಯಿತು.

ಚಂದ್ರಾಪೀಡ:—ಒಳ್ಳೇದು, ಅವನು ಯಾರಿರುವನೆಂಬದು ನಿನಗೆ ಗೊತ್ತಾಯಿತೇನು?

ಮಹಾಶ್ವೇತೆ:—ರಾಜಪುತ್ರನೆ, ಅವನ ಈ ದುರವಸ್ಥೆಯನ್ನು ನೋಡಿ ದುಃಖಿಸುತ್ತಿದ್ದ ಅವನ ಸೇವಕರಿಂದ ಅವನು ನಿನ್ನ ಪರಮ ಮಿತ್ರ ನೆಂಬದು ಗೊತ್ತಾ............

ಚಂದ್ರಾಪೀಡ:—ಅವನ ಹೆಸರು ವೈಶಂಪಾಯನನೆಂಬದೋ?

ಮಹಾಶ್ವೇತೆ:—ಹೌದು.

ಚಂದ್ರಾಪೀಡ:—ಹಾ! ಮಿತ್ರನೆ ಅಗಲಿದೆಯಾ! ಭಗವತೀ ಮಹಾ ಶ್ವೇತೆ, ನೀನು ಅನಾಯಾಸವಾಗಿ ಕಾದಂಬರಿಯ ಪ್ರೀತಿಯನ್ನು ನನಗೆ ದೊರಕಿಸಿಕೊಟ್ಟಿದ್ದೆ. ಈ ಜನ್ಮದಲ್ಲಂತೂ ಅದರ ಫಲವು ನನಗೆ ದೊರೆಯು

ಲಿಲ್ಲ. ಮುಂದಿನ ಜನ್ಮದಲ್ಲಾದರೂ ದೊರೆಯುವಂತೆ ಮಾಡು. ಈಗ ನನ್ನಿಂದ ಮಿತ್ರನ ವಿರಹವನ್ನು ಸಹಿಸುವದಾಗದು. ಹಾ ಮಿತ್ರಾ ವೈಶಂಪಾಯನಾ! ಹೇ ಪ್ರಿಯೆ ಕಾದಂಬರಿ..................(ಇಷ್ಟು ಮಾತಾಡುತ್ತಲೇ ಪ್ರಾಣಹೋಗಿ ನೆಲಕ್ಕೆ ಬೀಳುವಳು.)

ಮಹಾಶ್ವೇತೆ:—ಶಿವ ಶಿವ! ನನ್ನ ದೇಹವು ಪಾಪಸಂಚಯಾರ್ಥ ವಾಗಿಯೇ ಜನಿಸಿರಬಹುದ; ಹಾ! ದುರ್ದೈವವೆ, ನನ್ನ ಭಾಗ್ಯವು ನಿರ್ನಾಮ ವಾಗುವದೊತ್ತಟ್ಟಿಗಿರಲಿ, ಪ್ರಿಯಸಖಿಯಾದ ಕಾದಂಬರಿಯ ದುಃಖಕ್ಕೂ ನಾನೇ ಕಾರಣವಾದೆನಲ್ಲ! ಅವಳಿಗೆ ಮುಖವನ್ನಾದರೂ ಹೇಗೆ ತೋರಿ ಸಲಿ! (ದುಃಖಿಸುತ್ತ ಕೂಡ್ರುವಳು. ಇಷ್ಟರಲ್ಲಿ ಕೇಯೂರಕ, ಕಾದಂ- ಬರಿ, ಪತ್ರಲೇಖೆ, ಮದಲೇಖೆ ಇವರು ಪ್ರವೇಶಿಸುವರು.)

ಕಾದಂಬರಿ:—ಮದಲೇಖೇ, ಪತ್ರಲೇಖೆಯು ಹೇಳಿದ ಮೇರೆಗೆ ಚಂದ್ರಾಪೀಡನು ಈ ಅಚ್ಛೋದಸರೋವರಕ್ಕೆ ಬಂದಿರಬಹುದೇನು?

ಮದಲೇಖೆ:—ಬಂದಿರಬಹುದು.

ಕೇಯೂರಕ:—ದೇವೀ ಇಗೋ ಮಹಾಶ್ವೇತೆಯ ಗುಹೆಯು ಬಂತು. (ಚಂದ್ರಾಪೀಡನ ದೇಹವನ್ನು ನೋಡಿ ಬೆದರಿ ಹಿಂದಕ್ಕೆ ಸರಿದು ನಿಲ್ಲುವನು)

ಕಾದಂಬರಿ:—(ನೋಡಿ) ಹಾ! ಪ್ರಿಯಸಖೀ ಮಹಾಶ್ವೇತೇ ಇದೇನು ದುರವಸ್ಥೆ! ಶಿವಶಿವ!....(ಮೂರ್ಛಿತಳಾಗಿ ಬೀಳುತ್ತಲೇ ಮದ ಲೇಖೆಯು ಹಿಡಿದುಕೊಂಡು ಕೂಡ್ರುವಳು.)

ಮದಲೇಖೆ:—(ಗಾಳೀಹಾಕುತ್ತ) ಇವಳು ಇನ್ನೂ ಎಚ್ಚರವಾಗ ಲೊಲ್ಲಳು. ಏನು ಮಾಡಲಿ! ಮಹಾಶ್ವೇತೇ, ತರಲಿಕೇ, ನೀವಾದರೂ ಇದಕ್ಕೆ ತಕ್ಕ ಉಪಾಯಮಾಡಿರಿ.

ಮಹಾಶ್ವೇತೆ:—ಮದಲೇಖೇ, ಈ ಪಾಪಿಷ್ಠಳಿಂದ ಯಾವ ಸತ್ಕಾ ರ್ಯವೂ ಆಗುವಂತಿಲ್ಲ. (ಅಳಹತ್ತುವಳು.)

ಕಾದಂಬರಿ:—(ಮೂರ್ಛೆತಿಳಿದು) ಪ್ರಾಣನಾಥನೇ ನಿನ್ನನ್ನು ಕರೆದುಕೊಂಡು ಬರುವದಕ್ಕೆಂದು ಕಳಿಸಿದ ಪತ್ರಲೇಖೆಯು ಸಂಗಡ ನೀನು ನಿರೂಪಕಳಿಸಿದಂತೆ ಬೇಗ ಬಾರದ್ದರಿಂದ ನಿನ್ನ ವಿರಹದುಃಖವನ್ನು ತಾಳಲಾರದೆ, ಮಹಾಶ್ವೇತೆಯ ಭೆಟ್ಟಿಯ ನೆವದಿಂದ ಗುರುಹಿರಿಯರ ಅಪ್ಪಣೆ ಪಡೆದು ನಾನೇ ಬಂದೆನು. ಇಷ್ಟರಲ್ಲಿಯೇ ಈ ಹಾಡಾಗಿರುವದಲ್ಲ! ಈ ಘೋರಾರಣ್ಯದಲ್ಲಿ ಪ್ರಾಣಬಿಡಬೇಕೆಂದು ಬ್ರಹ್ಮಸಂಕಲ್ಪವಿತ್ತೆ! ಪ್ರಿಯನೆ ನಿನ್ನನ್ನು ಅಗಲಿ ಹೇಗೆ ಜೀವಿಸಲಿ!

||ಪದ|| ರಾಗ—ಅಸಾವೇರಿ ತಾಳ—ಆದಿ.

ನಾಥಾ ಪ್ರೀತಾ ಗತಿಸಿದೆಯಾ ||ಪ||
ಸೃಷ್ಟಿಯೊಳ್‌ನೀನತಿದುರ್ಬಲೆಯನ್ನು ||
ಕಷ್ಟವ ಸೋಸಲ್ ಗುರಿಮಾಡಿದೆಯಾ ||ಅ. ಪ.||
ಮನ್ಮಥಾರಿಯುತಾಂ ಘನಕೋಪವನು ||
ಮಿಗೆತಾಳಿದನೋ ಈಪ್ರದೇಶದೆ ||
ಜನ್ಮನೀಗಲಾ ಬ್ರಹ್ಮನುನಿನ್ನಯ ||
ಫಣೆಯೊಳ್ ಬರೆದಿರ್ದನೆ! ||೧|| ನಾಥಾ—

ಸಖೀಮಹಾಶ್ವೇತೆ, ಸಹಗಮನದಿಂದ ಪ್ರಾಣತ್ಯಾಗಮಾಡಿಕೊಳ್ಳುವೆನು. (ಹೀಗೆನ್ನುತ್ತ ಚಂದ್ರಾಪೀಡನ ಮುಖವನ್ನು ತೊಡೆಯ ಮೇಲೆ ಹಾಕಿಕೊಂಡು) ಪ್ರಿಯನೆ............(ಇಷ್ಟರಲ್ಲಿಯೇ ಚಂದ್ರಾಪೀಡನ ಮುಖದಿಂದ ಒಂದುಪ್ರಕಾರದ ಜ್ಯೋತಿಯು ಹೊರಬಿದ್ದು ಮೇಲಕ್ಕೆ ಹೋಗಿ) ಮಕ್ಕಳಿರಾ ಕೇಳಿರಿ, ಪುಂಡರೀಕನ ದೇಹವು ಚಂದ್ರಲೋಕದಲ್ಲಿ ಸುರಕ್ಷಿತವಾಗಿರುವದು. ನಿಮಗೆ ಧೈರ್ಯಬರುವದಕ್ಕಾಗಿ, ಚಂದ್ರಾಪೀಡನ ಈ ಅವಿನಾಶ ಶರೀರವನ್ನು ಇಲ್ಲಿಯೇ ಬಿಟ್ಟಿರುವೆನು. ಇದನ್ನು ದಹನ ಮಾಡಬೇಡಿರಿ; ಚನ್ನಾಗಿ ಸಂರಕ್ಷಿಸಿರಿ. ಕೆಲಕಾಲದ ನಂತರ ನಿಮ್ಮಿಬ್ಬರ ಕೋರಿಕೆಯು ಕೈಗೂಡುವದು. (ಸರ್ವರೂ ಆಶ್ಚರ್ಯಚಕಿತರಾಗುವರು; ಇಷ್ಟ

ರಲ್ಲಿಯೇ ಪತ್ರಲೇಖೆಯು ಅವಸರದಿಂದ ಎದ್ದು ಹೋಗುವಳು.)

ಮಹಾಶ್ವೇತೆ:—(ಅವಳನ್ನು ನೋಡಿ) ತರಲಿಕೇ ಹೋಗು ಹೋಗು ಬೇಗ ಹೋಗು, ಪತ್ರಲೇಖೆಯು ಬಹು ಅವಸರದಿಂದ ಎದ್ದು ಹೋದಳು. ಎತ್ತ ಹೋದಳೋ ನೋಡು.

(ತರಲಿಕೆಯು ಹೋಗುತ್ತಲೇ ಪಡದೆ ಬೀಳುವದು.)

---

## ಐದನೆಯ ಪ್ರವೇಶ.

—(-೩೦೮-)—

ಸ್ಥಳ: —ಅಚ್ಛೋದಸರೋವರ.)

(ಪತ್ರಲೇಖೆಯು ಚಂದ್ರಾಪೀಡನ ಕುದುರೆಯನ್ನು ಹಿಡಿದುಕೊಂಡು ದಂಡೆಯ ಮೇಲೆ ನಿಂತಿರುವಳು. ಇವಳು ಮುಂದೆ ಏನು ಮಾಡುವಳೆಂಬದನ್ನು ನೋಡುವದಕ್ಕಾಗಿ ಸ್ವಲ್ಪದೂರ ತರಲಿಕೆಯು ನಿಂತಿರುವಳು.)

ಪತ್ರಲೇಖೆ:—ಎಲೈ ಇಂದ್ರಾಯುಧವೆ, ನಮ್ಮ ಒಡೆಯನೇ ಗತಿಸಿದ ಮೇಲೆ ನಾವೀರ್ವರೂ ಪ್ರಾಣವನ್ನೇಕೆ ಇಡಬೇಕು? ಈ ಸರೋವರದಲ್ಲಿ ಹಾರಿಕೊಂಡು, ಈ ಜಡದೇಹದಿಂದ ಮುಕ್ತರಾಗುವದುಚಿತವಲ್ಲವೇ? ಆದದ್ದರಿಂದ ಬಾ. (ಕುದುರೆ ಸಹಿತ ಸರೋವರದಲ್ಲಿ ಬೀಳುವಳು. ಆ ಕೂಡಲೆ ಕುದುರೆಯ ಜನ್ಮ ತಾಳಿದ ಕಪಿಂಜಲನಿಗೆ ಅಶ್ವದೇಹವು ಹೋಗಿ ಪೂರ್ವದಂತೆ ಮನುಷ್ಯದೇಹವು ಪ್ರಾಪ್ತವಾಗಿ ಎದ್ದುನಿಲ್ಲುವನು.)

ತರಲಿಕಾ:—(ನೋಡಿ) ನಾನೀಗಲೇ ಹೋಗಿ ಈ ಸಂಗತಿಯನ್ನು ಮಹಾಶ್ವೇತೆಗೆ ತಿಳಿಸುವೆನು. ಹೋಗುವಳು.

ಕಪಿಂಜಲ:—ನನ್ನ ಉದ್ಧಟತನದ ಫಲವನ್ನಂತೂ ಅನುಭವಿಸಿದೆನು. ಇನ್ನು ಮಹಾಶ್ವೇತೆಯ ಬಳಿಗೆ ಹೋಗಿ, ನಾನು ಚಂದ್ರಲೋಕ

ದಲ್ಲಿ ತಿಳಿದುಕೊಂಡು ಬಂದ ವೃತ್ತಾಂತವನ್ನೆಲ್ಲ ಅವಳಿಗೆ ತಿಳಿಸಿ, ಆ ಮೇಲೆ ಶ್ವೇತಕೇತು ಮಹರ್ಷಿಗಳ ಆಶ್ರಮಕ್ಕೆ ಹೋಗುವೆನು. (ಹೋಗುವನು.)

---

## ಆರನೆಯ ಪ್ರವೇಶ.

—(-:o:-)—

ಸ್ಥಳ:—ಮಹಾಶ್ವೇತೆಯ ಗುಹೆ.

[ಮದಲೇಖೆ, ಕಾದಂಬರಿ ಮೊದಲಾದವರೆಲ್ಲರೂ ಇರುವರು. ಮಹಾಶ್ವೇತೆಯೂ ಕಪಿಂಜಲನೂ ಮಾತಾಡುತ್ತಿರುವರು)

ಕಪಿಂಜಲ—ಪೂಜ್ಯಳೇ ಇದಲ್ಲದೆ, ಯಾವ ವೈಶಂಪಾಯನನನ್ನು ನೀನು ಶಾಪದಿಂದ ದಗ್ಧಮಾಡಿದೆಯೋ ಅವನೇ ಪೂರ್ವಜನ್ಮದ ಪುಂಡರೀಕನು.

ಮಹಾಶ್ವೇತೆ:—(ದುಃಖದಿಂದ) ಹಾಯ್! ಹಾಯ್! ಹೇ ಪುಂಡರೀಕಾ! ಜನ್ಮಾಂತರದಲ್ಲಾದರೂ ನನ್ನ ಮೇಲೆ ನಿನ್ನ ಪ್ರೀತಿಯಿತ್ತಲ್ಲವೆ! ದೇವಾ, ಬ್ರಹ್ಮಹತ್ಯಮಾಡಿದ ಈ ಪಾಪಿಯನ್ನು ಇನ್ನೂ ಜೀವದಿಂದಿಡುವೆಯಾ? ಹಾ! ಪ್ರಿಯಾ ಮುನಿಕುಮಾರಾ............[ಅಳಹತ್ತುವಳು.]

ಕಪಿಂಜಲ:—ಮಹಾಶ್ವೇತೆ, ಇದರಲ್ಲಿ ನಿನ್ನ ದೋಷವೇನದೆ? ಇದೆಲ್ಲ ಆ ಚಂದ್ರನ ಶಾಪದ ಪರಿಣಾಮವು. ಈ ದುಃಖವನ್ನು ಬಿಡು.

ಮಹಾಶ್ವೇತೆ:—(ದುಃಖವನ್ನು ಶಾಂತಮಾಡಿಕೊಂಡು) ಒಳ್ಳೇದು ಇಷ್ಟು ದಿವಸಗಳವರೆಗೂ ನೀನು ಚಂದ್ರಲೋಕದಲ್ಲಿಯೇ ಇದ್ದೆಯೇನು?

ಕಪಿಂಜಲ:—ಇಲ್ಲ. ಕುದುರೆಯ ಜನ್ಮವನ್ನು ತಾಳಿ ಚಂದ್ರಾಪೀಡನ ಬಳಿಯಲ್ಲಿದ್ದೆನು.

ಮಹಾಶ್ವೇತೆ:—[ಆಶ್ಚರ್ಯದಿಂದ] ಕುದುರೆಯಾಗಿ ಜನಿಸಲಿಕ್ಕೆ ಕಾರಣವೇನು?

ಕಪಿಂ:—ನಾನು ಚಂದ್ರಲೋಕದಿಂದ ತಿರುಗಿ ಬರುತ್ತಿರುವಾಗ

ಆಕಾಶ ಸಂಚಾರಿಯಾದ ಒಬ್ಬ ಮಹರ್ಷಿಯನ್ನು ಅತಿವೇಗದಿಂದ ದಾಟಿದೆನು. ಆಗ ಅವನು "ನಿನ್ನ ಉದ್ಧಟತನದ ಫಲವನ್ನನುಭವಿಸುವದಕ್ಕಾಗಿ ಮೃತ್ಯುಲೋಕದ ಕುದುರೆಯಾಗಿ ಜನಿಸು" ಎಂದು ನನಗೆ ಶಾಪಕೊಟ್ಟನು.

ಮಹಾಶ್ವೇತೆ:—ಮುಂದೇನಾಯಿತು?

ಕಪಿಂಜಲ:—ಮುಂದೆ, ಚಂದ್ರನು ಚಂದ್ರಾಪೀಡನಾಗಿಯೂ, ಪುಂಡರೀಕನು ವೈಶಂಪಾಯನನಾಗಿಯೂ ಯಾವ ಉಜ್ಜಯಿನೀಪುರದಲ್ಲಿ ಜನ್ಮತಾಳಿದ್ದರೋ, ಅದೇ ಪಟ್ಟಣಕ್ಕೇ ನಾನು ಇಂದ್ರಾಯುಧವೆಂಬ ಕುದುರೆಯಾಗಿ ಬಂದೆನು. ಆಗ ನನಗೆ ಪೂರ್ವಜನ್ಮದ ಸ್ಮರಣೆಯಿತ್ತು. ಆದದ್ದರಿಂದಲೇ ಚಂದ್ರಾಪೀಡನನ್ನು ಕಿನ್ನರಮಿಥುನಗಳ ಬೆನ್ನುಹತ್ತಿಸಿ ನೀನಿರುವ ಈ ಸ್ಥಳಕ್ಕೆ ತಂದೆನು.

ಕಾದಂಬರಿ:—ಭಗವನ್, ಪತ್ರಲೇಖೆಯ ವೃತ್ತಾಂತವೇನು? ದಯಮಾಡಿ ಹೇಳಬೇಕು.

ಕಪಿಂಜಲ:—ಹೇ ರಾಜಪುತ್ರೀ, ಅವಳು ನನ್ನ ಸಂಗಡ ಸರೋವರದಲ್ಲಿ ಹಾರಿಕೊಂಡದ್ದೊಂದೇ ಗೊತ್ತು. ಮುಂದೆ ಅವಳ ಪರಿಣಾಮವೇನಾಯಿತೆಂಬದು ನನಗೆ ಗೊತ್ತಿಲ್ಲ ಈ ಸಂಗತಿಯನ್ನೂ ಚಂದ್ರಾಪೀಡ-ವೈಶಂಪಾಯನರು ಪುನಃ ಯಾವ ಜನ್ಮದಲ್ಲಿ ಬರತಕ್ಕವರಿರುವರೆಂಬ ಸಂಗತಿಯನ್ನೂ ತಿಳಿಯುವದಕ್ಕಾಗಿ, ನಾನು ಶ್ವೇತಕೇತು ಮಹರ್ಷಿಗಳ ಕಡೆಗೆ ಹೋಗುವೆನು. ನೀವು ಪ್ರಾಣತ್ಯಾಗ ಮಾತ್ರ ಮಾಡಿಕೊಳ್ಳಬೇಡಿರಿ. ಭಗವಂತನ ಧ್ಯಾನದಲ್ಲಿ ಕಾಲಕಳೆಯಿರಿ. ಅಂದರೆ ನಿಮಗೆ ಕಲ್ಯಾಣವಾಗುವದು.

||ಪದ|| ("ನಾರಿಝಾಚಿ" ಎಂಬಂತೆ)

ದೇವದೇವಾ ಸುರವಿನುತಾ ಸದಾಸಖದಾ ||ಪ||
ದೇವಾ ಸುರವಿನುತಾ, ತಾತಾ |
ಅಗ್ನಿನಯನಾ ಗಿರಿಜೇಶಾ ||

ವಿಘ್ನನಾಶನಾ ಪೊರೆ ನೀನು ಸತತ ||೧||

[ಹೋಗುವನು.]

---

# ಪಂಚಮಾಂಕಂ

## ಮೊದಲನೆಯ ಪ್ರವೇಶ.

—(-೩೦೩-)—

ಸ್ಥಳ:—ಚಾಂಡಾಲ ಕನ್ನಿಕೆಯ ಮನೆ.

(ಚಾಂಡಾಲ ಕನ್ನಿಕೆಯು ಗಿಳಿಯೊಡನೆ ಮಾತಾಡುತ್ತಿರುವಳು)

ಚಾಂಡಾಲಕನ್ನಿಕೆ:—ಮಗನೇ ವೈಶಂಪಾಯನಾ, ಇನ್ನೂ ಎಲ್ಲಿಗೆ ಹೋಗಬೇಕೆಂದು ಮಾಡಿದ್ದಿ? ಪುಂಡರೀಕ ಜನ್ಮವನ್ನು ನೀಗಿ, ಕಟ್ಟಕಡೆಗೆ ಈ ಅವಸ್ಥೆಯನ್ನು ಹೊಂದಿ, ಈಗ ಚಾಂಡಾಲರ ಕೈವಶವಾದದ್ದು ಸಾಕಾಗಲಿಲ್ಲವೆ? ಇದು ನಿನ್ನ ಅವಿನಯಕ್ಕೆ ತಕ್ಕ ಫಲವಾಯಿತು. ಇಗೋ ಈ ಹಣ್ಣು ತಿಂದು ಸ್ವಲ್ಪ ನೀರು ಕುಡಿ. (ಕೊಡಹೋಗುವಳು.)

ಗಿಳಿ:—(ತಕ್ಕೊಳ್ಳದೆ) ಅಮ್ಮಾ ನಾನು ಋಷಿಪುತ್ರನು, ಚಾಂಡಾಲರ ಕೈಯೊಳಗಿನ ಫಲಮೂಲಗಳನ್ನು ಹೇಗೆ ಸೇವಿಸಲಿ?

ಚಾಂಡಾಲಕನ್ನಿಕೆ:—ಮೂರ್ಖಾ ಇಷ್ಟು ಜಾಣತನವುಳ್ಳವನು ಅಂಥ ಪಾಪದ ಕೆಲಸಕ್ಕೆ ಮನಸ್ಸು ಹಾಕಿ ಈ ಗತಿಗೆ ಯಾಕೆ ಬಂದೆ? ಪಶ್ಚಾತ್ತಾಪವಾಗುವ ಕೆಲಸವನ್ನು ಜಾಣರು ಬಹುತರ ಮಾಡುವದಿಲ್ಲ. ತಿನ್ನು, ಋಷಿಪುತ್ರನಂತೆ; ಚಾಂಡಾಲರ ಕೈಯೊಳಗಿನ ಫಲಮೂಲಗಳನ್ನು ತಿನ್ನುವದಿಲ್ಲವಂತೆ. (ಕೊಟ್ಟು ತಿನ್ನಲಿಕ್ಕೆ ಹಚ್ಚಿ, ತನ್ನಲ್ಲಿ) ಶ್ವೇತಕೇತು ಮಹರ್ಷಿಗಳ ಅಪ್ಪಣೆಯ ಮೇರೆಗೆ ಈ ಗಿಳಿಯನ್ನು ವಿದಿಶಾನಗರಾಧಿಪತಿಯಾದ ಶೂದ್ರಕನಿಗೆ ಒಪ್ಪಿಸುವೆನು. (ಹೋಗುವಳು.)

---

# ಎರಡನೆಯ ಪ್ರವೇಶ.

—(-೩೦೩-)—

ಸ್ಥಳ:—ವನಪ್ರದೇಶ.

(ಕಪಿಂಜಲನೂ ಮೃತ್ಯುಂಜಯನೂ ಮಾತಾಡುತ್ತ ಬರುವರು.)

ಕಪಿಂಜಲ:—ಆಕಾಶವಾಣಿಯಾದಂದಿನಿಂದ ಅವರಲ್ಲಿ ಧೈರ್ಯ ವುಂಟಾಗಿ, ಪ್ರಾಣತ್ಯಾಗದ ಹವ್ಯಾಸವನ್ನೇ ಬಿಟ್ಟುಕೊಟ್ಟಿರುವರು.

ಮೃತ್ಯುಂಜಯ:—ಹಾಗಾದರೆ ಚಂದ್ರಾಪೀಡನ ದೇಹಸಂರಕ್ಷಣೆಯು ಸರಿಯಾಗಿ ಆಗುತ್ತಿರಬಹುದು?

ಕಪಿಂಜಲ:—ಓಹೋ! ಕಾದಂಬರಿಯು ಚನ್ನಾಗಿ ಉಪಚರಿಸುತ್ತಿರುವಳು.

ಮೃತ್ಯುಂಜಯ:—ಒಳ್ಳೇದು, ಚಂದ್ರಾಪೀಡನ ಪೂರ್ವಜನ್ಮದ ವೃತ್ತಾಂತವೇನು?

ಕಪಿಂಜಲ:—ಕೇಳು, ಶಾಪವಶದಿಂದ ಮನುಷ್ಯ ಜನ್ಮವನ್ನು ಹೊಂದಿ, ಚಂದ್ರಾಪೀಡನೆಂದು ಹೆಸರು ಪಡೆದ ಚಂದ್ರನು ಪರಕಾಯ ಪ್ರವೇಶ ಮಾಡಿ, ಜನ್ಮಾಂತರ ಹೊಂದಿ ಶೂದ್ರಕನೆಂಬ ಹೆಸರಿನಿಂದ ವಿದಿಶಾ ನಗರದಲ್ಲಿ ರಾಜ್ಯವಾಳುತ್ತಿರುವನು.

ಮೃತ್ಯುಂಜಯ:—ನಿಜ, ಚಂದ್ರನಿಗೆ ಪರಕಾಯ ಪ್ರವೇಶ ಮಾಡುವಷ್ಟು ಯೋಗ್ಯತೆಯು ಉಂಟೇ ಉಂಟು; ಇದರೊಳಗೇನೂ ಆಶ್ಚರ್ಯವಿಲ್ಲ. ಇರಲಿ, ಮಹಾಶ್ವೇತೆಯ ಶಾಪಪ್ರಭಾವದಿಂದ ವೈಶಂಪಾಯನನಿಗೆ ಗಿಳಿಯ ಜನ್ಮವು ಪ್ರಾಪ್ತವಾಗಿ, ಆ ಗಿಳಿಯು ಶೂದ್ರಕ ರಾಜನಲ್ಲಿರುವದೆಂದು ಹೇಳಿದೆಯಲ್ಲ? ಅದು ಅವನಿಗೆ ಹೇಗೆ ಸಿಕ್ಕಿತು?

ಕಪಿಂಜಲ:—ಲಕ್ಷ್ಯವಿಟ್ಟು ಕೇಳು, ಆ ಗಿಳಿಯು ದಂಡಕಾರಣ್ಯದೊಳಗಿನ ಒಂದು ಶಾಲ್ಮಲೀ ವೃಕ್ಷದಲ್ಲಿರುತ್ತಿತ್ತು. ಅದರ ತಾಯಿಯು ಅದರ ಜನ್ಮಕಾಲದಲ್ಲಿ ಪ್ರಸವವೇದನೆಯಿಂದ ಮರಣ ಹೊಂದಿತು. ತಂದೆ

ಯಾದರೂ ಒಬ್ಬ ಬೇಡನ ಹೊಡತದಿಂದ ಸತ್ತು ಹೋದನು. ಆ ಕಾಲಕ್ಕೆ ಬಹು ಕಷ್ಟದಿಂದ ಬಳಲುತ್ತಿರುವ ಆ ಗಿಳಿಯ ಮರಿಯನ್ನು ಹಾರೀತ ಕುಮಾರನು ತಮ್ಮ ತಂದೆಗಳಾದ ಜಾಬಾಲಿ ಋಷಿಗಳ ವಶಕ್ಕೆ ಕೊಟ್ಟನು. ಅಲ್ಲಿ ಆ ಮಹಾ ಮುನಿಗಳ ಮುಖದಿಂದ ತನ್ನ ಪೂರ್ವ ವೃತ್ತಾಂತ ವನ್ನು ಕೇಳುತ್ತಲೇ ಅದಕ್ಕೆ ಪೂರ್ವಜನ್ಮ ಸ್ಮರಣೆಯೂ, ಮನುಷ್ಯ ವಾಣಿಯೂ ಪ್ರಾಪ್ತವಾಗಿ, ತನ್ನ ಪ್ರಿಯೆಯಾದ ಮಹಾಶ್ವೇತೆಯ ಕಡೆಗೆ ಹೋಗುತ್ತಿರುವಾಗ ಚಾಂಡಾಲಕನ್ನಿಕೆಯು ಅದನ್ನು ಹುಡುಕಿಸಿ ತರಿಸಿ ಕೊಂಡು ಶೂದ್ರಕರಾಜನಿಗೆ ಒಪ್ಪಿಸಿರುವಳು. ಇನ್ನು ಸ್ವಲ್ಪ ದಿವಸಗಳ ಲ್ಲಿಯೇ ಆ ಶುಕ-ಶೂದ್ರಕರಿಬ್ಬರೂ ಶಾಪಮುಕ್ತರಾಗುವರು.

ಮೃತ್ಯುಂಜಯ:—ಅವರು ಶಾಪಮುಕ್ತರಾಗುವದು ನಿನಗೇನು ಗೊತ್ತು?

ಕಪಿಂಜಲ:—ನೀನು ನಮ್ಮ ಆಶ್ರಮಕ್ಕೆ ಶಿಷ್ಯವೃತ್ತಿಯನ್ನು ತಾಳಿ ಬರುವ ಮೊದಲು, ನಮ್ಮ ಗುರುಗಳು ಭವಿಷ್ಯವನ್ನು ಹೇಳಿದ್ದರು; ಹಾಗು ಈಗಲಾದರೂ ಶಾಪನಿವಾರಣಾರ್ಥವಾಗಿ ಮಂತ್ರವಿಧಿಯನ್ನು ನಡಿಸಿರುವರು.

ಮೃತ್ಯುಂಜಯ:—ಒಳ್ಳೇದು, ಆ ಚಾಂಡಾಲ ಕನ್ನಿಕೆಯೆಂದರೆ ಯಾರು?

ಕಪಿಂಜಲ:—ಅವಳು ಪುಂಡರೀಕನ ತಾಯಿಯಾದ ಲಕ್ಷ್ಮಿಯು; ಭೂಲೋಕದಲ್ಲಿ ಚಾಂಡಾಲಕನ್ನಿಕೆಯಾಗಿ ಜನಿಸಿರುವಳು.

ಮೃತ್ಯುಂಜಯ:—(ತನ್ನಲ್ಲಿ) ಇವನು ಹೇಳುವ ಸಂಗತಿಗಳೆಲ್ಲವೂ ಬಹು ಆಶ್ಚರ್ಯವಾಗಿ ತೋರುವವು. (ಪ್ರಕಾಶವಾಗಿ) ಇದನ್ನಾದರೂ ಗುರುಗಳೇ ಹೇಳಿದ್ದರೇನು?

ಕಪಿಂಜಲ:—ಹೌದು. ಇರಲಿ, ಪೂಜಾಕಾಲವು ಸಮೀಪಿಸಿತು; ಪುಷ್ಪಗಳನ್ನೆತ್ತಿಕೊಂಡು ಹೋಗುವಾ ನಡೆ.

---

# ಮೂರನೆಯ ಪ್ರವೇಶ.

—:(-o-):—

ಸ್ಥಳ— ಮಹಾಶ್ವೇತೆಯ ಗುಹೆ.

[ಬೆಳಗಿನ ಸಮಯ, ಮಹಾಶ್ವೇತೆಯೂ ತರಲಿಕೆಯೂ ಮಲಗಿರುವರು.]

ಮಹಾಶ್ವೇತೆ:—(ಸ್ವಪ್ನದಲ್ಲಿ) ಭೋ! ಜಗದೀಶಾ ಮಹೇಶ್ವರಾ! ಜಗನ್ಮಾತೆ ಸರ್ವಮಂಗಲೆ, ನಿಮ್ಮೊರ್ವರ ಪಾದಾರವಿಂದಗಳ ದರ್ಶನದಿಂದ ಇಂದಿಗೆ ನಾನು ಧನ್ಯಳಾದೆನು.

ತರಲಿಕೆ:—(ಎಚ್ಚರವಾಗಿ ತನ್ನಲ್ಲಿ) ಇದೇನು? ಇವಳು ಏನೇನೋ ಬಡಬಡಿಸುವಳಲ್ಲ. (ಅವಳನ್ನು ಮೈಮುಟ್ಟಿ ಎಬ್ಬಿಸುತ್ತ) ಏನು ಏನು ಸಖೀ ಏನು? ಯಾರ ಪಾದಾರವಿಂದಗಳು? ಮೇಲಕ್ಕೇಳು.

ಮಹಾಶ್ವೇತೆ:—(ಸಾವಕಾಶವಾಗಿ ಎದ್ದು ಕುಳಿತು.) ದೇವಾ!

ತರ:—ಸಖೀ ಏನೇನೋ ಬಡಬಡಿಸಿದೆಯಲ್ಲ? ಸ್ವಪ್ನಬಿದ್ದಿತ್ತೇನು?

ಮಹಾಶ್ವೇತೆ:—ಹೌದು. ಇಂದಿನ ಸ್ವಪ್ನದ ಮೇಲಿಂದ ವಿಚಾರ ಮಾಡಿದರೆ ಏನೋ ಸ್ವಲ್ಪ ಶುಭ ಚಿಹ್ನ ತೋರುತ್ತದೆ.

ತರಲಿಕೆ:—ಏನಾಯಿತು?

ಮಹಾಶ್ವೇತೆ:—ಪ್ರತ್ಯಕ್ಷ ಮಹೇಶ್ವರನು ಪಾರ್ವತೀಮಾತೆಯೊಡನೆ ಸ್ವಪ್ನದಲ್ಲಿ ಬಂದು "ಅಮ್ಮಾ ಮಗಳೆ, ನಿನ್ನ ತಪಸ್ಸಿನಿಂದ ಸಂತುಷ್ಟನಾದೆನು. ನಿನ್ನ ಸರ್ವಕಷ್ಟವೂ ಮುಗಿಯಿತು. ಇನ್ನು ಮುಂದೆ ನಿನ್ನ ಪತಿಯ ಸಂಗಡ ಚಿರಕಾಲ ಸುಖವನ್ನನುಭವಿಸು." ಎಂದು ಹೇಳಿದನು.

ತರಲಿಕೆ:—ಆ ಮೇಲೆ?

ಮಹಾಶ್ವೇತೆ: ಆಮೇಲೆ ಪಾರ್ವತೀಮಾತೆಯು ಕುಂಕುಮವನ್ನು ಹಚ್ಚಿ, ಧರಿಸಲಿಕ್ಕೆ ವಸ್ತ್ರಾಲಂಕಾರಗಳನ್ನು ಕೊಟ್ಟು ಸೌಭಾಗ್ಯವತಿಯಾಗೆಂದು ಆಶೀರ್ವದಿಸಿದಳು.

ತರಲಿಕೆ:—ಸಖೀ, ಇದರ ಮೇಲಿಂದ ನಿನ್ನ ಭಾಗ್ಯೋದಯದ

ಕಾಲವು ಸಮೀಪಿಸಿರುವದೆಂಬದಕ್ಕೆ ಏನೂ ಸಂಶಯವಿಲ್ಲ.

ಮಹಾಶ್ವೇತೆ:—ಪ್ರಿಯಾ ಮುನಿಕುಮಾರಾ, ಚಕೋರಪಕ್ಷಿಯು ಚಂದ್ರಿಕಾಮನವನ್ನಪೇಕ್ಷಿಸುವಂತೆಯೂ, ಕಮಲಿನಿಯು ರವಿಯ ಆಗಮನವನ್ನೀಕ್ಷಿಸುವಂತೆಯೂ ನಾನು ನಿನ್ನ ಮಾರ್ಗಪ್ರತೀಕ್ಷೆ ಮಾಡುತ್ತಿರುವೆನು. ಬೇಗಬಂದು ನನ್ನ ವಿರಹದುಃಖವನ್ನು ಶಾಂತಮಾಡು. ಭೋ ಜಗಜ್ಜನನೀ,

||ಪದ|| ರಾಗ—ಕಲ್ಯಾಣಿ, ತಾಳ—ಆದಿ.

ಕಾವುದೌಮಗಳಂ ಜನನೀ | ಭವಸಂಹಾರಿಣೀ ||ಪ||
ಶ್ರೀ ಕಲ್ಯಾಣೀ ||ಅ. ಪ||
ಭೋಮನ್ಮಾತೇತವೆನುತಿಸುವೆಂ | ಅಮರಗಣಾರ್ಚಿತಳೇ |
ಕಾಮಿತಫಲದಾಯಿನಿಕಲ್ಯಾಣಿ | ಕಾಮಾರಿಯಸತಿಕಾ |
ಳಿಯೆಬಾಗುವೆ | ಅಮಿತಮಹಿಮಳೆ ||೧||

---

## ನಾಲ್ಕನೆಯ ಪ್ರವೇಶ.

ಸ್ಥಳ:—ಕಾದಂಬರಿಯ ಆಶ್ರಮ.

(ಪೂಜೆಗಾಗಿ ಬಂಧಿಸಿದ ಚಂದ್ರಾಪೀಡನ ದೇಹದ ಹತ್ತರ ಕಾದಂಬರಿಯೂ, ಮದಲೇಖೆಯೂ ಮಾತಾಡುತ್ತ ನಿಂತಿರುವರು.)

ಕಾದಂಬರಿ:—ಸಖೀ ಮದಲೇಖೆ, (ಚಂದ್ರಾಪೀಡನ ಕಡೆಗೆ ಕೈತೋರಿಸಿ) ಈ ದಿವಸ ಈ ಕಾಮದೇವನ ಪೂಜೆಯನ್ನು ಮಾಡುವೆನು; ಆದದ್ದರಿಂದ:—

||ಪದ|| ("ವಾಳ್ಯಾಚಾ ಜಾಜಾಜಾರ್ಘುಣೀ" ಎಂಬಂತೆ)

ಬೇಗನೆತಾತಾರೌಸಖೀ ಮಂಗಳಲೇಪನವಂ ||ಪ||
ಮಧುರಸುಗಂಧವನೀ | ಚದುರನಕೊರಳೊಳ್ ತೊಡೆಯಲ್ಕೆ ||
ಪದುಮಾಕ್ಷೀಬೇಗ ||೧|| ತಾತಾ—

ಸ್ಮರಶತಸುಂದರಗೆ | ಪರಿಮಳಯುಕ್ತದ್ರವ್ಯಗಳಂ ||
ಧರಿಸುವೆನೌತಾಬೇಗ ||೨|| ತಾತಾ—(ಪೂಜಿಸುವಳು.)

(ಚಿತ್ರ ತೋರಿಸಿ) ಸಖೀ ಮದಲೇಖೆ, ಇವರಿಬ್ಬರಲ್ಲಿ ನಿನಗೆ ಯಾರು ಚಂದ ಕಾಣಿಸುವರು?

ಮದಲೇಖೆ:— (ನೋಡಿ ನಕ್ಕು) ಇದನ್ನೇನು ವಿಚಾರಿಸುವೆ? ಇದು ನೋಡಿದರೆ ಚಿತ್ರವು, ಇವನು ನೋಡಿದರೆ ಪ್ರತ್ಯಕ್ಷ ಮನ್ಮಥ ಸಮ ಸುಂದರನು. ಚಿತ್ರಕ್ಕೂ ಮನುಷ್ಯನಿಗೂ ಹೋಲಿಸುವದಾದರೂ ಹೇಗೆ?

ಕಾದಂಬರಿ:—ನಿಜ. (ಸ್ವಲ್ಪ ತಡೆದು) ಹಾ! ಹಾ! ನಮ್ಮಿಂದ ಇನ್ನೊಂದು ದೊಡ್ಡ ತಪ್ಪಾಗಿರುವದು.

ಮದಲೇಖೆ:—ಅದೇನು?

ಕಾದಂಬರಿ:—ಮುಕ್ತಾಹಾರವನ್ನು ಇನ್ನೂ ಹಾಕಿಲ್ಲವಲ್ಲ?(ಹಾರವನ್ನು ತಕ್ಕೊಂಡು) ಮಹಾರಾಜ, ತಾವು ನನ್ನ ಕ್ರೀಡಾಪರ್ವತದ ಮಣಿಮಂದಿರದಲ್ಲಿರುವಾಗ ಮದಲೇಖೆಯು ಸಂಗಡ ನಿಮಗೆ ಕೊಟ್ಟು ಕಳಿಸಿದ ಈ ಮುಕ್ತಾಹಾರವನ್ನು ನಾನೇ ನಿಮ್ಮ ಕೊರಳಲ್ಲಿ ಹಾಕುವೆನು. (ಹಾಕಿ) ಸಖೀ ಪೂಜಾಕಾರ್ಯದಲ್ಲಿ ಮತ್ತೇನಾದರೂ ಉಳಿದಿರುವದೇನು?

ಮದಲೇಖೆ:— (ಚಿತ್ರದ ಕಡೆಗೆ ನೋಡಿ) ಸಖೀ ಕಾದಂಬರಿ, ನಮ್ಮಿಂದ ಇನ್ನೂ ಒಂದು ದೊಡ್ಡ ತಪ್ಪಾಗಿರುವದು; ಸಿಟ್ಟಾಗುವದಿಲ್ಲವೆಂದರೆ ಹೇಳುವೆನು.

ಕಾದಂಬರಿ:— (ತನ್ನಲ್ಲಿ) ಇವಳು ಈಗ ಏನೋ ವಿನೋದ ಮಾಡುವಂತೆ ತೋರುತ್ತದೆ. (ಪ್ರಕಾಶವಾಗಿ) ಇಲ್ಲ ಇಲ್ಲ ಸಿಟ್ಟಾಗುವದಿಲ್ಲ ಹೇಳು.

ಮದಲೇಖೆ:—ಇಗೋ ನೋಡು, ಈ ಚಿತ್ರದೊಳಗಿನ ಕಾಮದೇವನ ತೊಡೆಯ ಮೇಲೆ ರತಿಯು ಕುಳಿತಿರುವಳು. ಬಂಧಿಸಿರುವ ಈ

ಕಾಮದೇವನ ತೊಡೆಯು ಮೇಲೆ ಯಾರೂ ಇಲ್ಲ. ಆದದ್ದರಿಂದ ಇವನ ಸೌಂದರ್ಯದಲ್ಲಿ ಬಹು ಕೊರತೆಯುಂಟಾಗಿರುವದು.

ಕಾದಂಬರಿ:—(ಲಜ್ಜೆಯಿಂದ) ಇದೇನು ಚೇಷ್ಟಿಸುವೆಯೆ? ಇರಲಿ ಬಿಡು ನಿನ್ನ ವಿನೋದವು; ಪೂಜೆಯುನ್ನು ನೋಡಲಿಕ್ಕೆ ಮಹಾಶ್ವೇತೆಯು ಈ ವರೆಗೂ ಬರಲಿಲ್ಲ. ಬೇಗ ಹೋಗಿ ಅವಳನ್ನು ಕರೆದುಕೊಂಡು ಬಾ. ಈ ಸಂಗತಿಯನ್ನು ಮಾತ್ರ ಅವಳ ಮುಂದೆ ತಿಳಿಸಬೇಡ.

ಮದಲೇಖೆ:—ಹಾಗಾದರೆ ಮಹಾಶ್ವೇತೆಯು ಬರುವವರೆಗಾದರೂ ಕಾಮದೇವನ ತೊಡೆಯು ಮೇಲೆ ರತಿಯು ಕೂಡ್ರುವಳಷ್ಟೆ? (ನಗುತ್ತ ಹೋಗುವಳು.)

ಕಾದಂಬರಿ:—ಇವಳಾದರೂ ನನ್ನ ಮನಸ್ಸಿನಲ್ಲಿದ್ದದ್ದನ್ನೇ ಹೇಳುವಳು. (ಕೆಲಹೊತ್ತಿನ ವರೆಗೆ ಚಂದ್ರಾಪೀಡನ ಕಡೆಗೆ ನೋಡಿ ನಿಟ್ಟುಸುರುಬಿಟ್ಟು)ಮಹಾರಾಜನೇ, ನಾನು ನಿನ್ನ ಕೈಯಲ್ಲಿ ಕೊಟ್ಟಿರುವ ಈ ಪುಷ್ಪಬಾಣವನ್ನು ನನ್ನ ಮೇಲೆ ಪ್ರಯೋಗಿಸುವೆಯಾ? ಬೇಡ ಬೇಡ. ಎಷ್ಟು ಬೇಡಿಕೊಂಡರೂ ಕೇಳಲೊಲ್ಲೆಯಲ್ಲ? ಒಟ್ಟಿನ ಮೇಲೆ ಪುರುಷರು ನಿರ್ದಯವಂತರೆಂಬದು ಸುಳ್ಳಲ್ಲ. ಆಗಲಿ ನಿನ್ನ ಇಷ್ಟೆಯಿದ್ದರೆ ತೊಡೆಯು ಮೇಲೆ ಕೂಡ್ರುವೆನು. (ಹತ್ತರ ಹೋಗಿ ಏನೋ ಕೇಳಿದಂತೆ ಮಾಡಿ ಬೆದರಿ ಹಿಂದಕ್ಕೆ ಸರಿದು) ವಾಃ ಮದಲೇಖೇ ನಾನು ಅವನ ತೊಡೆಯು ಮೇಲೆ ಕೂಡ್ರಲಿಕ್ಕೆ ಹೋಗಿದ್ದೆನೇನು? ಅವನ ಉಡಿಗಿಯೊಳಗಿನ ಪುಷ್ಪಗುಚ್ಛವನ್ನು ಸರಿಮಾಡಲಿಕ್ಕೆ ಹೋಗಿದ್ದೆನು. ಇದನ್ನು ಕಂಡು ನೀನು ಏನೋ ಎಣಿಸಿಕೊಂಡು ಮಾತಾಡುವೆ! (ಸುತ್ತುಮುತ್ತು ನೋಡಿ ಯಾರೂ ಇಲ್ಲದ್ದನ್ನು ಕಂಡು ನಕ್ಕು) ಇದೇನು? ನಾನು ನಾಚಿದ್ದಾದರೂ ಯಾರ ಸಲುವಾಗಿ? ಇಲ್ಲಿ ಮದಲೇಖೆಯಾದರೂ ಎಲ್ಲಿರುವಳು? "ಕಳ್ಳರ ಜೀವವು ಹುಳ್ ಹುಳ್ಳಗೆ" ಎಂಬಂತಾಯಿತು. ಇರಲಿ, ಈಗ ನಾನು ಹತ್ತರ ಹೋಗಿ ತೊಡೆಯು ಮೇಲೆ ಕುಳಿತು ಹೇಗೆ ಕಾಣುತ್ತಿರುವೆನೆಂಬ

ದನ್ನು ಕನ್ನಡಿಯಲ್ಲಿ ನೋಡುವೆನು. (ಹತ್ತರ ಕುಳಿತು ಕನ್ನಡಿಯನ್ನು ನೋಡಿ ಅದನ್ನು ಕೆಳಗಿಟ್ಟು ಚಂದ್ರಾಪೀಡನ ದೇಹದ ಕಡೆಗೆ ಮತ್ತೊಮ್ಮೆ ನೋಡಿ) ಇದೇನು? ಈ ಮೂರ್ತಿಯು ಎಷ್ಟು ರಮಣೀಯವಾಗಿ ತೋರುವದು? ನನ್ನ ದೇಹದಲ್ಲಿ ರೋಮಾಂಚನಗಳೇಳಹತ್ತಿದವು; ಘರ್ಮಬಿಂದುಗಳು ಉತ್ಪನ್ನವಾಗಹತ್ತಿದವು; ದೇಹವು ಕಂಪಿತವಾಗಹತ್ತಿತು; ಈ ವರೆಗೆ ಸರ್ವಸ್ವವೂ ಕಾಲ್ಪನಿಕವೇ ಆಗಿತ್ತು; ಈಗ ಮಾತ್ರ ತೀರಾ ವಿಸ್ಮೃತಳಾದೆನು. ಹೇ ಕಾಮದೇವಾ! ನಿನ್ನ ಸಾಮರ್ಥ್ಯವು ವಿಲಕ್ಷಣವಾದದ್ದಿರುತ್ತದೆ! ಪ್ರಿಯಾ! ಚಂದ್ರಾಪೀಡಾ!

||ಪದ|| ರಾಗ—ವಸಂತ, ತಾಳ—ಆದಿ.

ತನುಶಾಂತಿ ಪೊಂದಿಸೊ ||ಪ||
ನಿನಗೀಗ ಬೇಡುವೆ ||ಅ. ಪ.||
ಕುಸುಮಶರನ ಬಾಧೆಯಿಂದೆ ||
ಕಸವಿಸಿಯಾಗುವದು ||೧||

[ಹೀಗೆನ್ನುತ್ತಲೇ ಕಣ್ಣುಮುಚ್ಚಿ ಅವನಿಗೆ ಗಾಢಾಲಿಂಗನ ಕೊಡುವಳು; ಆ ಕೂಡಲೆ ಚಂದ್ರಾಪೀಡನು ಜೀವಂತನಾಗುವನು.]

ಚಂದ್ರಾಪೀಡ:—ಇದೇನು? ಆರ್ದ್ರ ಕಮಲಿನಿಯ ದೇಂಟಿನಿಂದ ಯಾರೋ ನನ್ನನ್ನು ಬಂಧಿಸಿರುವರಲ್ಲ! (ನೋಡಿ) ಅಹಹ! ನನ್ನ ಪ್ರಿಯೆ ಕಾದಂಬರಿ! [ಅವಳಿಗೆ ಆಲಿಂಗನ ಕೊಟ್ಟು] ಶಾಬಾಸ್ ದೈವಾ:—

||ಪದ|| ರಾಗ—ಮಾಲಕಂಸ, ತಾಳ—ಆದಿ.

ಧನ್ಯನಾದೆ ನಾನಿಂದಿಗೆ ಜಗದೊಳ್ ||ಪ||
ಧನ್ಯನಾದೆ ಶಿವನ ದಯದೆ ||
ಮನ್ಯುವನಳಿದೆಂ ಸಕಲ ಬಗೆಯಿಂ ||೧||
ಮಾನ್ಯಳಿವಳ ಸಂಗದಿಂದೆ ||
ಅನ್ಯೋನ್ಯದ ಸುಖವನು ಪೊಂದುವೆನು ||೨||

ಪ್ರಿಯೆ ಕಣ್ತೆರೆದು ನೋಡು.

ಕಾದಂಬರಿ:—ಅಪ್ಪಯ್ಯ! [ಲಜ್ಜೆಯಿಂದ ಒಂದು ಮಗ್ಗಲಿಗೆ ಸರಿದು ನಿಲ್ಲುವಳು.]

ಚಂದ್ರಾಪೀಡ:—ಪ್ರಿಯೆ, ಅಭ್ಯುದಯ ಕಾಲದಲ್ಲಿ ನಾಚಿಕೊಳ್ಳುವ ದೇತಕ್ಕೆ? ಈ ಚಿತ್ರವನ್ನು ನೋಡು! ಇದರಲ್ಲಿ ರತಿಯು ಕಾಮದೇವನಿಗೆ ನಾಚಿ ಸುಮ್ಮನೆ ನಿಂತಿರುವಳೇನು?

ಕಾದಂಬರಿ:—(ನಾಚಿ) ಇಷ್ಟೆಲ್ಲ ಮಾತಾಡಿದ ಮೇಲೆ ತಾವು ಈ ವರೆಗೆ ಎಚ್ಚರವಿದ್ದು ನನ್ನ ಮನೋಭಿಪ್ರಾಯವನ್ನು ತಿಳಿದುಕೊಂಡಂತೆ ಕಾಣುತ್ತದೆ.

ಚಂದ್ರಾಪೀಡ:—ಛೇ ಛೇ ಪ್ರಿಯೆ, ನೀನು ನನಗೆ ಆಲಿಂಗನ ಕೊಟ್ಟದ್ದರಿಂದಲೇ ನಾನು ಸಜೀವನಾದೆನು. ಆದರೆ ನಿನ್ನ ಸರ್ವ ಮನೋಭಿಪ್ರಾಯವನ್ನು ನಾನು ಅಂತಃಸಾಕ್ಷಿತ್ವದಿಂದ ತಿಳಿದುಕೊಂಡೆನೇಹೊರತು ಮತ್ತೇನೂ ಇಲ್ಲ. ನಿನಗಾದರೂ ನಾನು ಯಾರು? ಎಲ್ಲಿಯವನು? ಎಂಬ ಸಂಗತಿಯು ಕಪಿಂಜಲನಿಂದ ಗೊತ್ತಾದದ್ದೇ ಇರುತ್ತದೆ.

ಕಾದಂಬರಿ:—ನಿಜ. ಯಾವತ್ತು ತಿಳಿಯಿತು; ನಾನು ತಮ್ಮ ಸಂಗಡ ಮಾತಾಡುವದೇ ತಪ್ಪು. (ಲಜ್ಜೆಯಿಂದ ಸುಮ್ಮನಿರುವಳು.)

ಚಂದ್ರಾಪೀಡ:—ಛೇ ಛೇ, ಹಾಗೇನೂ ತಿಳಿದುಕೊಳ್ಳಬೇಡ. ಇದ್ದ ಸಂಗತಿಯನ್ನು ವಿದಿತಪಡಿಸುವದರಲ್ಲಿ ಅಪರಾಧವಾದರೂ ಏನು? ಹೇಳು ನಾಚಿಕೊಳ್ಳಬೇಡ.

ಕಾದಂಬರಿ:—ಪ್ರಿಯನೆ, ಆ ದಿವಸ ಹಿಮಗೃಹದಲ್ಲಿರುವಾಗ ನೀನು ಸಂದಿಗ್ಧ ಭಾಷಣ ಮಾಡಿ ಹೊರಟು ಹೋಗಲಿಲ್ಲವೆ? ಅದು ಇನ್ನೂ ನನ್ನ ಧ್ಯಾನದಲ್ಲುಂಟು.

ಚಂದ್ರಾಪೀಡ:—ಸುಳ್ಳೇ ಮನಬಂದಂತೆ ಮಾತಾಡಿದರೆ ನಾನಾದರೂ ಏನು ಮಾಡಲಿ? ಆ ದಿವಸ ಸಂದಿಗ್ಧಭಾಷಣ ಮಾಡಿದ್ದೇನೋ

ನಿಜ. ಆದರೆ ಈ ವಿಷಯವಾಗಿ ನನಗೆ ದೋಷಕೊಡಲಿಕ್ಕೆ ಬರುವಂತಿಲ್ಲ.

ಕಾದಂಬರಿ:—ಅದೇಕೆ?

ಚಂದ್ರಾಪೀಡ:—ಮಹಾಶ್ವೇತೆಯ ದುಃಖ ಪರಿಹಾರವಾಗುವ ವರೆಗೆ ಪಾಣಿಗ್ರಹಣಮಾಡಲಿಕ್ಕಿಲ್ಲವೆಂದು ನೀನು ಶಪಥಮಾಡಿದ್ದು ಸಟಿಯೋ ದಿಟವೋ?

ಕಾದಂಬರಿ:—ದಿಟವು.

ಚಂದ್ರಾಪೀಡ:—ಅಂದಮೇಲೆ, ಆಗಿನ ಕಾಲಕ್ಕೆ ನಾನು ನಿಶ್ಚಿತ ಭಾಷಣಮಾಡಿದ್ದರೆ ಹೇಗಾಗುತ್ತಿತ್ತು? ನೀನೇ ವಿಚಾರಿಸು.

ಕಾದಂಬರಿ:—ಈಗ ಮಾತ್ರ ಮಹಾಶ್ವೇತೆಯು ದುಃಖದಿಂದ ಮುಕ್ತಳಾಗಿರುವಳೇನು?

ಚಂದ್ರಾಪೀಡ:—ಓಹೋ! ನಿಶ್ಚಯವಾಗಿ ಅವಳು ದುಃಖದಿಂದ ಬಿಡುಗಡೆ ಹೊಂದಿದಳು.

ಕಾದಂಬರಿ:—ಅದು ಹೇಗೆ?

ಚಂದ್ರಾಪೀಡ:—ಕೇಳು, ನಾನೂ ಪುಂಡರೀಕನೂ ಒಮ್ಮೆಲೇ ಶಾಪಮುಕ್ತರಾದೆವು. ಆ ಕೂಡಲೆ ಅವನು ಚಂದ್ರಲೋಕದೊಳಗಿಂದ ಇಳಿದು ಅತ್ತ ಮಹಾಶ್ವೇತೆಯ ಆಶ್ರಮಕ್ಕೆ ಹೋದನು. ನಾನು ಇತ್ತ....

ಮದಲೇಖ:—[ಓಡುತ್ತ ಬಂದು] ಸಖೀ ಕಾದಂಬರೀ, ಮಹಾಶ್ವೇತೆಯೂ ಪುಂಡರೀಕನೂ ಬಂದರು.

ಕಾದಂಬರಿ:—ಎಲ್ಲಿ? ಎಲ್ಲಿರುವಳು?

ಚಂದ್ರಾಪೀಡ:—ಇಗೋ ಇಗೋ ಪ್ರಿಯೆ ಬಂದರು! ಹತ್ತರವೇ ಬಂದರು. (ಪುಂಡರೀಕನೂ ಮಹಾಶ್ವೇಯೂ ಬರುವರು; ಪುಂಡರೀಕನು ಚಂದ್ರಾಪೀಡನನ್ನೂ ಮಹಾಶ್ವೇತೆಯು ಕಾದಂಬರಿಯನ್ನೂ ಒಳ್ಳೇ ಭರದಿಂದ ಅಪ್ಪಿಕೊಳ್ಳುವರು.)

ಕೇಯೂ:—ಮದಲೇಖೇ, ಈ ಶುಭವೃತ್ತಾಂತವನ್ನು ಚಿತ್ರರಥ

ರಾಜರಿಗೂ ಹಂಸರಾಜರಿಗೂ ತಿಳಿಸುವದಕ್ಕಾಗಿ, ನಾನು ಹೇಮಕೂಟ ಪರ್ವತಕ್ಕೆ ಹೋಗುವೆನು. ನೀನಾದರೂ ತಾರಾಪೀಡ ಮಹಾರಾಜರ ಕಡೆಗೆ ಹೋಗಿ ತಿಳಿಸು. [ಹೋಗುವನು.]

ಮದಲೇಖೆ:— (ತನ್ನಲ್ಲಿ) ನಮ್ಮ ತಾರಾಪೀಡಮಹಾರಾಜ, ವಿಲಾಸವತಿ, ಶುಕನಾಸಪ್ರಧಾನ, ಮನೋರಮಾ ಇವರೆಲ್ಲರೂ ತಮ್ಮ ರಾಜ್ಯಲಕ್ಷ್ಮೀ ಭೋಗಸುಖವನ್ನು ತೊರೆದು, ಈ ವರೆಗೂ ಈ ವನದಲ್ಲಿಯೇ ತಪಸ್ಸು ಮಾಡುತ್ತ ಕುಳಿತಿರುವರು. ಅವರ ತಪಸ್ಸು ಇಂದಿಗೆ ಸಾರ್ಥಕವಾಯಿತು. ನಾನೀಗಲೇ ಹೋಗಿ ಈ ವೃತ್ತಾಂತವನ್ನು ಅವರಿಗೆ ತಿಳಿಸುವೆನು. (ಹೋಗುವಳು.)

ಚಂದ್ರಾಪೀಡ:—ಪುಂಡರೀಕಾ, ನಾನು ನಿನಗೆ ಮಾವನಾದರೂ ನನ್ನನ್ನು ಮಿತ್ರನೆಂದೇಭಾವಿಸು. ಮಹಾಶ್ವೇತೆಯ ಮೇಲೆ ನಿನ್ನ ಪ್ರೀತಿಯು ಇರುವದೆಂಬದು ಗೊತ್ತಾಗದಮೂಲಕ ನಿನಗೆ ನಾನು ಶಾಪಕೊಟ್ಟೆನು. ಅದನ್ನು ಮಾತ್ರ ಮನಸ್ಸಿನಲ್ಲಿ ಹಿಡಿಯಬೇಡ.

ಪುಂಡರೀಕ:—ಛೇ ಛೇ ಅದನ್ನೇಕೆ ಮನಸ್ಸಿನಲ್ಲಿ ಹಿಡಿಯಲಿ! ನನ್ನ ಕರ್ಮದ ಫಲವನ್ನು ನಾನು ಅನುಭವಿಸಿದೆನು. ಈ ವಿಷಯವಾಗಿ ನಿನಗೆ ದೋಷಕೊಡಲಾರೆನು.

ಕಪಿಂಜಲ:—(ಆಕಾಶಮಾರ್ಗದಿಂದ ಇಳಿದು) ಬಹು ದಿವಸದಿಂದ ವಿರಹದುಃಖವನ್ನನುಭವಿಸಿ ಅಂತ್ಯದಲ್ಲಿ ಅಪಾರ ಸುಖವನ್ನು ಹೊಂದಿದ ನನ್ನ ಪ್ರಿಯಮಿತ್ರರೀರ್ವರಿಗೂ ವಿಜಯವುಂಟಾಗಲಿ.

ಇಬ್ಬರೂ:—(ಅಪ್ಪಿಕೊಂಡು) ಮಿತ್ರಾ ಇಂದಿಗೆ ನಾವು ಧನ್ಯರಾದೆವು.

ಕಪಿಂಜಲ:—ಮಿತ್ರರೇ, ವಿಧಿಯು ವಿಮುಖವಾಗಲು ಸರ್ವ ಕಷ್ಟವೂ ವಿಮುಖವೇ ಸರಿ.

ಚಂದ್ರಾ:—ಕಪಿಂಜಲಾ, ನೀನು ಇಂದ್ರಾಯುಧವಾಗಿ ಬಂದಾಗ

ನಿನಗೆ ಬಹು ಕಷ್ಟಕೊಟ್ಟೆನಲ್ಲವೆ?

ಕಪಿಂಜಲ:—ಮಹಾನುಭಾವನೆ, ನಿನ್ನಂಥವನ ಸೇವೆಯು ನನಗೆ ದೊರೆತದ್ದೇ ಹೆಚ್ಚು; ಈ ವಿಷಯವಾಗಿ ನಾನು ಬಹು ಭಾಗ್ಯಶಾಲಿಯೆಂದೆಣಿಸುವೆನು.

ತರಲಿಕೆ:—ಮಹಾರಾಜರೆ ಇತ್ತ ನೋಡಿರಿ; ಮದಲೇಖೆಯಿಂದ ಈ ಸಂಗತಿಯನ್ನು ಕೇಳಿ, ತಾರಾಪೀಡಮಹಾರಾಜ, ವಿಲಾಸವತೀದೇವಿ ಮೊದಲಾದವರೆಲ್ಲರೂ ಬರುತ್ತಿರುವರು.

ಚಂದ್ರಾಪೀಡ:—ಎಲ್ಲಿ? ಎಲ್ಲಿ?

ತರಲಿಕೆ:—ಇಗೋ ನೋಡಿರಿ.

(ತಾರಾಪೀಡ, ವಿಲಾಸವತಿ, ಶುಕನಾಸಪ್ರಧಾನ, ಮನೋರಮಾ, ಮದಲೇಖೆ ಇವರು ಪ್ರವೇಶಿಸುವರು.)

ಚಂದ್ರಾಪೀಡ:—(ತಾರಾಪೀಡನಿಗೂ ವಿಲಾಸವತಿಗೂ ನಮಸ್ಕರಿಸುವನು.)

ಇಬ್ಬರೂ:—ಬಾಳಾ ಕ್ಷೇಮದಿಂದಿರುವೆಯಾ?

ಚಂದ್ರಾಪೀಡ:—ತಮ್ಮ ಆಶೀರ್ವಾದದಿಂದ ಕ್ಷೇಮದಿಂದಿರುವೆನು. ಆರ್ಯ ಶುಕನಾಸಾ, ಆರ್ಯೇ ಮನೋರಮೆ ನಿಮ್ಮಿರ್ವರಿಗೂ ಈ ಬಾಲಕನು ವಂದಿಸುವನು.

ಇಬ್ಬರೂ:—ಬಾಳಾ ಚಿರಂಜೀವಿಯಾಗಿ ಬಾಳು.

ಚಂದ್ರಾಪೀಡ:—(ಪುಂಡರೀಕನನ್ನು ಮುಂದೆ ಮಾಡಿ) ಯಾವ ವೈಶಂಪಾಯನನನ್ನು ಕರೆತರುವದಕ್ಕಾಗಿ ನಿಮ್ಮ ಅಪ್ಪಣೆ ಪಡೆದು ಉಜ್ಜಯಿನಿಯಿಂದ ಹೊರಟು ಬಂದೆನೋ ಅವನೇ ಇವನು. (ಪುಂಡರೀಕನು ನಮಸ್ಕರಿಸುವನು.)

ಇಬ್ಬರೂ:—[ಅವನ ಕಡೆಗೆ ನೋಡುತ್ತ ನಿಲ್ಲುವರು.]

ಚಂದ್ರಾಪೀಡ:—ಆರ್ಯ ಶುಕನಾಸಾ, ಮನಸ್ಸಿನಲ್ಲಿ ಏನೋ

ಆಲೋಚನೆ ನಡೆದಂತೆ ತೋರುತ್ತದೆ?

ಶುಕನಾಸ:—ಇವನು ನಮ್ಮ ವೈಶಂಪಾಯನನಂತೆ ಕಾಣುವದಿಲ್ಲ.

ಕಪಿಂಜಲ:—ಇಗೋ ನೋಡಿರಿ. ಗುರುಗಳು ನನ್ನನ್ನು ಇತ್ತ ಕಳಿಸಿದ್ದಲ್ಲದೆ ತಾವೂ ಸ್ವರ್ಗಲೋಕದಿಂದ ಇಳಿದು ಬಂದರು.

ಶ್ವೇತಕೇತು:— (ಪ್ರವೇಶಿಸಿದ ಕೂಡಲೆ ಎಲ್ಲರೂ ನಮಸ್ಕರಿಸುವರು) ಸರ್ವರಿಗೂ ಕಲ್ಯಾಣವಾಗಲಿ. ಆರ್ಯ ಶುಕನಾಸಾ, ನಿನ್ನ ಮನಸ್ಸಿನೊಳಗಿನ ವಿಚಾರವನ್ನು ನಾನು ಅಂತರ್ಜ್ಞಾನದಿಂದ ತಿಳಿದುಕೊಂಡು ಇತ್ತ ಬಂದೆನು. ಕೇಳು, ಇವನು ನಿನ್ನ ಪುತ್ರ ವೈಶಂಪಾಯನನು; ಸಂಶಯಗೊಳ್ಳಬೇಡ; ಶಾಪಮುಕ್ತನಾಗಿ ಪುಂಡರೀಕನಾಗಿರುವನು. ಇವನನ್ನು ಅನ್ಯನೆಂದು ಭಾವಿಸಬೇಡ. (ಪುಂಡರೀಕನನ್ನು ಅವನ ಹತ್ತರ ಕಳಿಸುವನು.)

ಶುಕನಾಸ:—ಮಹಾತ್ಮರೇ, ನನ್ನ ಮಗನು ಪುನಃ ದೊರಕಿದ್ದು ತಮ್ಮ ಅನುಗ್ರಹದಿಂದಲೇ ಸರಿ.

ಕೇಯೂರಕ:—(ಪ್ರವೇಶಿಸಿ) ಮಹಾರಾಜರೇ ಚಿತ್ರರಥಗಂಧರ್ವರಾಜರೂ, ಹಂಸರಾಜರೂ ಬಂದರು.

ತಾರಾಪೀಡ:—ಎಲ್ಲಿರುವರು? (ನೋಡಿ) ಬರಿ, ಬರಿ, ಮಹಾರಾಜರೇ ಇತ್ತ ಬರ್ರಿ.

ಚಿತ್ರರಥ ಮತ್ತು ಹಂಸರಾಜ:—ಛೀ ಛೀ ನಾವು ಕನ್ಯಾಪಕ್ಷದವರು! ನಮಗೇಕೆ ಇಷ್ಟು ಮಾನವು!! ಇರಲಿ, ವಧೂವರರೇ ಇತ್ತಬರ್ರಿ. (ಚಿತ್ರರಥರಾಜನು ಕಾದಂಬರೀ ಚಂದ್ರಾಪೀಡರ ಕಯ್ಯನ್ನೂ, ಹಂಸರಾಜನು ಮಹಾಶ್ವೇತಾ ಪುಂಡರೀಕರ ಕಯ್ಯನ್ನೂ ಹಿಡಿದು)

ಜಾಮಾತನೇ:— ||ಸಾಕಿ||

ಮತ್ಪುತ್ರಿಯುಮೇಣ್ ರಾಜ್ಯವನೀಯುವೆ ಸ್ವೀಕರಿಸ್ವೆ ಮುದದಿಂದ||

ಚಂದ್ರಾಪೀಡ-ಪುಂಡರೀಕ:—

ಸತ್ಕ್ರೀಮದೊಳಾಂ ನಿಮ್ಮಯ ವಚನವ ಪಾಲಿಪೆನತಿಹಿತದಿಂದ ||
ವರಿಸುವೆನಿವಳನ್ನು ಪರಿಹರಿಸುವೆ ಸಂತಪವನ್ನು ||೧||

(ಪಾಣಿಗ್ರಹಣಮಾಡಿ ಸರ್ವ ಗುರುಹಿರಿಯರಿಗೂ ನಮಸ್ಕರಿಸುವರು)

ಸರ್ವರೂ:—ಆಯುಷ್ಮಾನ್ ಭವ, ಕೀರ್ತಿಮಾನ್ ಭವ, ಶತ ಪುತ್ರ ಸೌಭಾಗ್ಯವತೀ ಭವ. [ಹೀಗೆ ಆಶೀರ್ವದಿಸುವರು.]

ಕಾದಂಬರಿ:—ಪ್ರಿಯನೆ, ಪತ್ರಲೇಖೆಯ ವೃತ್ತಾಂತವೇನೂ ತಿಳಿಯಲಿಲ್ಲ.

ಚಂದ್ರಾಪೀಡ:—ಪ್ರಿಯೆ, ಅವಳು ನನ್ನ ಹೆಂಡತಿ ರೋಹಿಣಿಯು. ನಾನು ದಿವ್ಯಲೋಕವನ್ನು ಬಿಟ್ಟು ಭೂಲೋಕಕ್ಕೆ ಬಂದದ್ದರಿಂದ, ಅವಳು ನನ್ನನ್ನು ಅಗಲಿ ಇರಲಾರದೆ ಪತ್ರಲೇಖೆಯಾಗಿ ಹುಟ್ಟಿ, ನನ್ನ ತಾಂಬೂಲದ ಕರಡಿಗೆ ಹಿಡಿಯುವ ತೊತ್ತಾಗಿದ್ದಳು. ನಾನು ಆಕೆಯ ಸಲುವಾಗಿ ಗಂಧರ್ವ ನಗರದಲ್ಲಿಯೂ, ತಾಯಿ-ತಂದೆಗಳ ಸಲುವಾಗಿ ಉಜ್ಜಯಿನೀ ಪುರದಲ್ಲಿಯೂ ಇರುವೆನು. ಅವಳ ದರ್ಶನವು ನಿನಗೆ ಚಂದ್ರಲೋಕದಲ್ಲಿ ಆಗುವದು.

ಶ್ವೇತಕೇತು:—ಬಾಲಕರೆ, ನಿಮ್ಮ ಸರ್ವ ಕಷ್ಟಗಳನ್ನೂ ಪರಿಹರಿಸಿ ಆನಂದಾಬ್ಧಿಯಲ್ಲಿ ಮುಳುಗಿಸಿದಂಥ ಶ್ರೀ ಮಹೇಶ್ವರನನ್ನು ಕುರಿತು ಮಂಗಲವನ್ನು ಪಾಡಿರಿ.

ಸರ್ವರೂ:—ತಥಾಸ್ತು.

||ಮಂಗಲಂ|| ರಾಗ—ಮಾಲಕಂಸ. ತಾಳ—ಆದಿ.

ಮಂಗಲಮನುಪಮನೇ ಶಂಕರಾ ||ಪ||

ಭೋ ಗಂಗಾಧರಾ! ಕರುಣಿಪುದಘಹರ ಪರಾತ್ಪರಾ ||
ಗಿರಿಜಾವರನೆ | ಕರುಣಾಕರನೆ | ಚರಾಚರಾಸಕಲಲೋಕಪಾಲನೆ||ಅ.ಪ.||

ಕಾಲಾರಿಶಿರೋ-| ಮಾಲಿಧರಶಿವ | ಫಾಲಾಕ್ಷಸುರ-| ಪಾಲಾಗ್ರಣೀ |
ಶೈಲಾಧಿಪಪೊರೆ | ವಿಶ್ವೇಶಾ|| ಶುಭ್ರಾಂಗ | ಅನಂಗ-| ವಿಭಂಗ| ಸುಕಾಂತ |
ಲಂಬೋದರಪಿತ| ಶಂಭೋಪಶುಪತೆ| ಮಹೇಶನೆ| ಭಕ್ತಜನ ಹಿತೈಷಿಯೆ ||

(ಪಡದೆ ಬೀಳುತ್ತದೆ.)

---




